

# ಹಂಗಾಮ


ಸಂಪುಟ - 1 ಸಂಚಿಕೆ - 12,13
15,31 ಡಿಸೆಂಬರ್ 2004

ಸಂಪಾದಕ
**ವೆಂಕಟ್ರಮಣ ಗೌಡ**

**ರಕ್ಷಾ ಪುಟ ಕಲಾಕೃತಿ:**
ಚಂದ್ರನಾಥ ಆಚಾರ್ಯ
**ವಿನ್ಯಾಸ :** ಶ್ರೀಪಾದ್
**ಹಿಂಪುಟ ಛಾಯಾಚಿತ್ರ :**
ಶ್ರೀಧರ್ ಹೆಗಡೆ ತುಂಬೆಮನೆ
**ಸಂಚಿಕೆ ಕಲಾವಿದರು :** ಸೃಜನ್,
ರಾಂಕೊ, ಹರಿಚರಣ್,
ಕೆ.ನಾಮದೇವ,
ಎಂ. ಎಲ್. ಸೋಮವರದ

ವಾರ್ಷಿಕ ಚಂದಾ : 150/-
ಸಂಸ್ಥೆಗಳಿಗೆ : 250/-

**ವಿಳಾಸ :**
ಅವಧಿ ಪ್ರಕಾಶನ
ನಂ. 15, ನಾಗೇಶ್ ಬಿಲ್ಡಿಂಗ್,
ಮಾರಿಯಮ್ಮ ದೇವಸ್ಥಾನದ
ಹತ್ತಿರ, ಕದಿರೇನ ಹಳ್ಳಿ,
ಬನಶಂಕರಿ 2ನೇ ಹಂತ,
ಬೆಂಗಳೂರು - 560 070
ಈ-ಮೇಲ್ : awadhi@sify.com


**ಪ**ತ್ರಿಕೆಯ ಎಲ್ಲ ವಿಭಾಗಗಳ ಹೊಣೆಗಾರಿಕೆಯೂ ಒಬ್ಬನದೇ ಹೆಗಲ ಮೇಲಿರುವಾಗ ಆಕಸ್ಮಿಕಗಳು ಎದುರಾದರೆ ಎಂಥ ದೊಡ್ಡ ವ್ಯತ್ಯಯವಾಗಬಹುದು ಎಂಬುದು ಮೊದಲ ಬಾರಿಗೆ ಅನುಭವ ವಾಯಿತು. ತೀರಾ ವೈಯಕ್ತಿಕ ಗೋಳುಗಳನ್ನು ಇಲ್ಲಿ ಹೇಳಿಕೊಳ್ಳುವುದಕ್ಕೆ ನನಗೆ ಇಷ್ಟವಿಲ್ಲ. ಆದರೆ ಪತ್ರಿಕೆಯ ಮೇಲೆ ಅದರ ಪರಿಣಾಮ ವಾಗುವುದನ್ನು ತಪ್ಪಿಸಲು ಸಾಧ್ಯವಾಗದೇ ಇದ್ದುದಕ್ಕಾಗಿ ನಿಮ್ಮೆಲ್ಲರ ಕ್ಷಮೆ ಕೇಳುತ್ತೇನೆ.

'ಹಂಗಾಮ'ವನ್ನು ಈ ಸಂಚಿಕೆಯಿಂದ ಜೋಡಿ ಸಂಚಿಕೆಯೆಂದು ಪ್ರತಿ ತಿಂಗಳ ಮೊದಲ ವಾರದಲ್ಲಿ ನಿಮ್ಮ ಕೈಗಿಡುವ ನಿರ್ಧಾರ ಮಾಡಲಾಗಿದೆ.

ಒಬ್ಬನೇ ಕೂತು ಪತ್ರಿಕೆಯನ್ನು ಹದಿನೈದು ದಿನಗಳಿಗೊಮ್ಮೆ ಸಿದ್ಧಪಡಿಸಿ ಕೊಡುವಾಗಿನ ಮೊದಲ ಆತಂಕ ಗುಣಮಟ್ಟವನ್ನು ಕಾಯ್ದುಕೊಳ್ಳುವ ಕುರಿತದ್ದು. ಪ್ರತಿ ಸಂಚಿಕೆಯೂ ಸಂಗ್ರಾಹ್ಯವಾಗುವಂತೆ ರೂಪಿಸಲು ಸ್ವಲ್ಪ ಹೆಚ್ಚಿನ ಸಮಯ ಬೇಕೆನ್ನಿಸಿದೆ. ಆದ್ದರಿಂದಲೇ ಈ ತೀರ್ಮಾನ. ತಿಂಗಳಿಗೆರಡು ಸಂಚಿಕೆಗಳ ಬದಲು ಒಂದೇ ಸಂಚಿಕೆಯನ್ನು ಸ್ವಲ್ಪ ಹೆಚ್ಚು ಪುಟಗಳಲ್ಲಿ ಕೊಡಿ ಎಂಬುದು ಹಿರಿಯರನೇಕರ ಹಾಗೂ ಹಲವಾರು ಓದುಗರ ಬಹು ದಿನಗಳ ಸಲಹೆಯೂ ಆಗಿತ್ತು.

ಈ ಸಂಚಿಕೆ ಇದುವರೆಗಿನ ಸಂಚಿಕೆಗಳಿಗಿಂತ ಹಲವು ಕಾರಣ ಗಳಿಗಾಗಿ ಬೇರೆಯದೇ ಸ್ವರೂಪದ್ದಾಗಿದೆ. ನಮ್ಮ ಸುತ್ತಲಿನ ವಿದ್ಯಮಾನಗಳನ್ನು ಸೂಕ್ಷ್ಮವಾಗಿ ಗಮನಿಸುವ ಮನಸ್ಸುಗಳ ಸಂವೇದನೆ ಇಲ್ಲಿ ದಾಖಲಾಗಿದೆ. ನಿಮಗೆ ಈ ಸಂಚಿಕೆ ಇಷ್ಟವಾದೀತು.

ಪತ್ರಿಕೆಯೆಂದರೆ ಕೆಲವು ಲೇಖನಗಳು, ಕಥೆಗಳು, ಕವಿತೆಗಳು ಒಂದೆಡೆಗೆ ಸೇರಿದ ಒಂದು ಕಟ್ಟು ಮಾತ್ರವಲ್ಲ. ಅದೊಂದು ಉದ್ದೇಶ ವನ್ನು ರೂಪಿಸುವ ಪ್ರಯತ್ನ. ನಮ್ಮ ತಳಮಳಗಳನ್ನು, ತಡವರಿಕೆಗಳನ್ನು ಮನಗಂಡು, ವಿಚಿತ್ರ ಸಂಕಟಗಳ ಆಚೆ ನಡೆಯುವ ದಾರಿಯೊಂದರ ಹಂಬಲ ಪತ್ರಿಕೆಯದ್ದಾಗಬೇಕು. ಎಲ್ಲ ಕನಸುಗಳಿಗೆ, ಕುತೂಹಲಗಳಿಗೆ, ಜೀವನಪ್ರೀತಿಗೆ, ನಮ್ಮದೇ ಅಂತರಂಗಕ್ಕೆ ತೆರೆದುಕೊಳ್ಳುತ್ತಲೇ ಆ ಮೂಲಕ ಉತ್ತಮ ಸಾಹಿತ್ಯವನ್ನು ಓದಿಸಬೇಕೆಂಬ ಆಸೆ 'ಹಂಗಾಮ'ದ್ದು. ಇಂಥ ಹಂಬಲವನ್ನು ಕೃತಿಗಿಳಿಸುವಲ್ಲಿ ಕೈಜೋಡಿಸಿರುವ ಎಲ್ಲ ಲೇಖಕರಿಗೆ, ಪತ್ರಿಕೆಯ ಪುಟಗಳಿಗೆ ಚೆಂದ ಕಟ್ಟುವಲ್ಲಿ ನೆರವಾಗುತ್ತಿರುವ ಕಲಾವಿದ ಮಿತ್ರರುಗಳಿಗೆ ಹಾಗೂ ಆರ್ಥಿಕವಾಗಿ ಗಟ್ಟಿಗರಲ್ಲದ ನಮ್ಮ ಕಷ್ಟದ ಕತ್ತಲಲ್ಲಿ ಕೈಹಿಡಿದಿರುವ ನಿಮಗೆ ಕೃತಜ್ಞತೆಗಳು.

ಪತ್ರಿಕೆಯನ್ನು ಮತ್ತಷ್ಟು ಚೆಂದಗೊಳಿಸುವ ನಿಟ್ಟಿನಲ್ಲಿ ಏನು ಮಾಡಬಹುದೆಂಬುದರ ಬಗ್ಗೆ ಕೇಳಿಕೊಂಡದ್ದಕ್ಕೆ ಬಹುಪಾಲು ಓದುಗರು ಸ್ಪಂದಿಸಿದ್ದಾರೆ. ಅವರೆಲ್ಲರ ಸಲಹೆಗಳನ್ನು ಸಮನ್ವಯಗೊಳಿಸಿ ಅಳವಡಿಸಿಕೊಳ್ಳುವುದಕ್ಕೆ ಮುಂದಿನ ಸಂಚಿಕೆಗಳಲ್ಲಿ ಪ್ರಯತ್ನಿಸುತ್ತೇವೆ.

ಬಿಡಾರ ಬದಲಿಸಿದ್ದೇವೆ. ಹೊಸ ವಿಳಾಸವನ್ನು ದಯವಿಟ್ಟು ಗಮನಿಸಿ.

**ಸಂಪಾದಕ**





ವಿನಾಕಾರಣ ಇಷ್ಟವಾಗಿಬಿಡುವ ಈ ಚಿತ್ರಗಳನ್ನು ನೋಡಿ. ಅಮೆರಿಕನ್ ಛಾಯಾ ಗ್ರಾಹಕ ಲೂರಿ ಪಿಂಕ್ ಸೆರೆ ಹಿಡಿದ ಚಿತ್ರಗಳಿವು. 'ಪತ್ರಿಕೆಗಳು ಪ್ರಿಂಟ್ ಮಾಡಿದ್ದೇ ಫೋಟೊ ಗ್ರಾಫ್‌ಗಳಲ್ಲ. ಸಂಪಾದಕನನ್ನು ಕೊಂಚ ಕನ್‌ಫ್ಯೂಸ್ ಮಾಡಬಲ್ಲಂಥ, ಪ್ರಕಟಿಸೋಕೆ ಹಿಂಜರಿತ ಉಂಟು ಮಾಡಬಲ್ಲಂಥೋವೇ ನಿಜವಾದ ಫೋಟೊಗಳು' ಎಂದು ಲೂರಿ ಡಿಫೈನ್ ಮಾಡ್ತಿದಾನೆ. 'ಟೈಮ್ಸ್ ಜರ್ನಲ್ ಆಫ್ ಫೋಟೊಗ್ರಫಿ' ಮ್ಯಾಗಝಿನ್ "World Class Photographer' ಎಂದು ಬಣ್ಣಿಸಿದೆ ಈ ಲೂರಿಯನ್ನು.



ಲೂರಿ ತನ್ನ 12ನೇ ವಯಸ್ಸಿನಿಂದಲೇ ಫೋಟೋಗ್ರಫಿಯನ್ನು ಅಭ್ಯಸಿಸಲು ತೊಡಗಿದ. ಈಗ ಆತನಿಗೆ 53 ವರ್ಷ. ಪಿಯಾನೋ ನುಡಿಸುವುದು ಲೂರಿಯ ಮತ್ತೊಂದು ಪ್ರೀತಿಯ ಹವ್ಯಾಸ.

'ಫೋಟೋಗ್ರಾಫರ್‌ಗೆ ಹಿಂಜರಿಕೆ ಇರಬಾರದು' ಎಂಬುದು ಲೂರಿಯ ಸಿದ್ಧಾಂತ. ಈತನ ಮೇಲೆ ಅತ್ಯಂತ ಪ್ರಭಾವ ಬೀರಿದ್ದು ಕಾರ್ಲ್‌ಮಾರ್ಕ್ಸ್ ಅಂತೆ.

# ಸಾಹಿತ್ಯಕ ಪತ್ರಿಕೋದ್ಯಮ ಮತ್ತು ಸುಳ್ಳುಗಳು

❑ ನಟರಾಜ್ ಹುಳಿಯಾರ್

ಸಾಹಿತ್ಯಕ ಪತ್ರಿಕೋದ್ಯಮ ಅಥವಾ ಲಿಟರರಿ ಜರ್ನಲಿಸಂನ ಅಪಾಯ ಕುರಿತು ಒಮ್ಮೆ ಡಿ.ಆರ್. ನಾಗರಾಜ್ ಅವರು ಸೂಚ್ಯವಾಗಿ ಹೇಳಿದ ಮೇಲೆ, ಈ ಬಗೆಯ ಬರವಣಿಗೆಯ ಸಮಸ್ಯೆಯನ್ನು ಅರಿಯಲು ಕನ್ನಡ ಜನಪ್ರಿಯ ಪತ್ರಿಕೆಗಳು ಪ್ರಕಟಿಸುವ 'ಸಾಹಿತ್ಯಕ' ಎನ್ನಲಾಗುವ ಬರಹಗಳನ್ನು ಎಚ್ಚರದಿಂದ ಗಮನಿಸಿದೆ. ಆಗಿನಿಂದ ನಾನು ಕಂಡುಕೊಂಡಂತೆ ಈ ಸಾಹಿತ್ಯಕ ಪತ್ರಿಕೋದ್ಯಮದ ಕೆಲವು ಲಕ್ಷಣಗಳು ಹಾಗೂ ಅಪಾಯಗಳು ಇವು:

ಒಂದೇ ಒಂದು ಐಡಿಯಾ ಇಲ್ಲದಿದ್ದರೂ ಯಾವ ಲೇಖಕನ ಬಗೆಗಾದರೂ ಬರೆದುಬಿಡುವುದು; ಸಾಹಿತ್ಯದ ಬಗ್ಗೆ, ಸಾಹಿತ್ಯ ವಿಮರ್ಶೆಯ ಬಗ್ಗೆ ಖಚಿತ ನಿಲುವುಗಳಿಲ್ಲದೆ ಕ್ಲೀಷೆಗಳನ್ನು ಪೋಣಿಸುವುದು; ಲೇಖಕನೊಬ್ಬನ ಜನ್ಮದಿನ ಗುರುತು ಹಾಕಿಕೊಂಡು ತಕ್ಕ ಬರಹ ಬರೆಯುವುದು; ಸಂತೆಯ ಹೊತ್ತಿಗೆ ಮೂರು ಮೊಳ ನೇಯ್ದರೂ ದೊಡ್ಡ ಥೀಸಿಸ್ಸಿನ ಠೇಂಕಾರ ತೋರುವುದು; ಗೊತ್ತಿಲ್ಲದ ಸಾಹಿತ್ಯ ಪ್ರಕಾರಗಳ ಬಗ್ಗೆ ಧಾರಾಳವಾಗಿ ರೀಲು ಬಿಡುವುದು; ಬರವಣಿಗೆಯಲ್ಲಿ ಒಂದೇ ಆಕೃತಿಗೆ ಜೋತು ಬೀಳುವುದು; ನುಡಿಗಟ್ಟುಗಳು, ಐಡಿಯಾಗಳು, ದೃಷ್ಟಿಕೋನ ಎಲ್ಲದರಲ್ಲೂ ಏಕತಾನತೆ; ವೇಗದ ಬರವಣಿಗೆಯ ಅರೆಸುಳ್ಳುಗಳು; ಡೆಡ್‌ಲೈನ್‌ನ ಒತ್ತಾಯಕ್ಕೆ ತೇಲಿಸಿ ಬರೆಯುವುದು; ಸುಳ್ಳೋ, ನಿಜವೋ ಇವತ್ತಿನ ಬರವಣಿಗೆಯ ಕತೆ ನಡೆದರೆ ಸಾಕು ಎಂದು ಪರೀಕ್ಷೆ ಕಟ್ಟಿದ ವಿದ್ಯಾರ್ಥಿಯ ಮನಃಸ್ಥಿತಿಯಲ್ಲಿ ಬರೆಯುವುದು; ಆಯಾ ಪತ್ರಿಕೆಗೆ ತಕ್ಕಂತೆ ಶೈಲಿ ಬದಲಾಯಿಸುವುದು; ಲೇಖಕನೊಬ್ಬ ಸತ್ತಾಗ, ಅವನ ಯಾವ ಪುಸ್ತಕವನ್ನೂ ಗ್ರಹಿಸದೆ, ಚರ್ಚಿಸದೆ, ಸದರಿ ಲೇಖಕನ ಜೊತೆ ಅಡ್ಡಾಡಿದ್ದು, ಅವನೊಡನೆ ಬಿಯರ್ ಕುಡಿದದ್ದು, ಆತ ಇನ್ನ್ಯಾರಿಗೋ ಕೈಕೊಟ್ಟದ್ದು ಇವನ್ನೇ ಬರೆಯುವುದು; ಪ್ರಶಸ್ತಿ ಬಂದಾಗ ಅಭಿನಂದನೆಯ ಶೈಲಿಯನ್ನೂ ಸತ್ತಾಗ ಸಂತಾಪದ ಶೈಲಿಯನ್ನೂ ಆರಾಮಾಗಿ ಆರೋಪಿಸಿಕೊಳ್ಳುವುದು; ಯಾವುದೋ ಮುಖ್ಯ ಅಂಶವೊಂದನ್ನು ವಿವರಿಸಲು ಸರಿಯಾದ ಶಬ್ದವನ್ನು ಆರಿಸಿಕೊಳ್ಳುವ ವ್ಯವಧಾನವಿಲ್ಲದೆ ಆ ಕ್ಷಣ ಸಿಕ್ಕ ಶಬ್ದವೇ ಚಿಂತನೆಯ ಹಾದಿ ನಿರ್ಧರಿಸುವುದು.... ಇವೆಲ್ಲ ವೇಗದ ಹಾಗೂ 'ಅನೈತಿಕ' ಬರವಣಿಗೆಯ ಅಪಾಯಗಳೇ. ಇವನ್ನೆಲ್ಲಾ ಪಟ್ಟಿ ಮಾಡುವಾಗ ವಾರಪತ್ರಿಕೆಯ ಪತ್ರಕರ್ತರೊಬ್ಬರು ಲೇಖಕರೊಬ್ಬರ ವ್ಯಕ್ತಿಚಿತ್ರ ಬರೆಯುವಾಗ 'ಇವರದು ನೆಮ್ಮದಿಯ ಸಂಸಾರ' ಎಂದು ವರ್ಣಿಸಿದ್ದು ನೆನಪಾಯಿತು. ಕನಿಷ್ಠ ಸೂಕ್ಷ್ಮತೆಯುಳ್ಳ ಯಾವ ಲೇಖಕನೂ ಇನ್ನೊಬ್ಬನ ಸಂಸಾರದ ಬಗ್ಗೆ ಇಷ್ಟು ಖಾತ್ರಿಯಾಗಿ ಬರೆಯಲಾರ! ಪತ್ರಿಕೆಯೊಂದರಲ್ಲಿ ಗಾಯಕರಾದ ಶಿವಮೊಗ್ಗ ಸುಬ್ಬಣ್ಣನವರ ಬಗ್ಗೆ ಅಭಿನಂದನಾ ಲೇಖನ ಬರೆಯುತ್ತಾ, ಕವಿ ಬಿ.ಆರ್. ಲಕ್ಷ್ಮಣ್‌ರಾವ್ 'ಇವರಿಗೆ ಮೊಮ್ಮಗುವಾಗುವುದೊಂದೇ ಬಾಕಿ' ಮುಂತಾಗಿ ಬರೆದದ್ದು ಕೂಡ ನೆನಪಾಗುತ್ತಿದೆ. 'ಸಾಹಿತ್ಯವನ್ನು ಓದುವವರು ಕಡಿಮೆ; ಆದರೆ ಪತ್ರಕರ್ತೀಯ ಬರವಣಿಗೆಯನ್ನು ಓದುವುದು ಕಷ್ಟ' ಎಂದು ಆಸ್ಕರ್ ವೈಲ್ಡ್ ಹೇಳಿದ್ದು ಬಹುತೇಕ ಸೂಕ್ಷ್ಮ ಮನಸ್ಸಿನ ವ್ಯಕ್ತಿಗಳ ಅಭಿಪ್ರಾಯವೂ ಆಗಿರಬಹುದು. ಇಪ್ಪತ್ತನೆಯ ಶತಮಾನದ ದೊಡ್ಡ ಕವಿ ಟಿ.ಎಸ್. ಎಲಿಯಟ್ ದಿನಪತ್ರಿಕೆಗಳನ್ನು ಓದಲು ಹಿಂಜರಿಯುತ್ತಿದ್ದ ಎಂದು ಲಂಕೇಶರು ಬರೆದ ನೆನಪು.

ಆದರೆ, ಸುಳ್ಳು ಕೇವಲ ಜರ್ನಲಿಸಮ್ಮಿನ ವೇಗದ ಸಾಹಿತ್ಯಕ ಬರವಣಿಗೆಯಲ್ಲಿ ಮಾತ್ರ ಕಾಣಿಸಿಕೊಳ್ಳುತ್ತದೆ

ಎಂದು ತೀರ್ಮಾನಿಸುವುದು ಕಷ್ಟ. ಅದು ವರ್ಷಾನುಗಟ್ಟಲೆ ಯೋಚಿಸಿ ಬರೆದ ಕತೆಯಲ್ಲೂ ಪದ್ಯದಲ್ಲೂ ಕಾದಂಬರಿಯಲ್ಲೂ ಕಾಣಿಸಿಕೊಳ್ಳುವ ಸಾಧ್ಯತೆ ಇದ್ದೇ ಇರುತ್ತದೆ. ದಿನನಿತ್ಯ ಭಾಷಣ ಮಾಡುವವನ ಔಪಚಾರಿಕ ಮಾತುಗಳಲ್ಲಿ ಸುಳ್ಳು ಅನಿವಾರ್ಯವಾಗಿ ಕಾಣಿಸಿಕೊಳ್ಳುತ್ತಿರುತ್ತದೆ. ತನ್ನೊಳಗೆಲ್ಲ ಕೊರೆದು ಹೋಗುವಂತೆ ಯೋಚಿಸಬಲ್ಲ ತತ್ವಜ್ಞಾನಿ ನೀಷೆಯಂತೆ ಅಥವಾ ಎದುರಿಗಿದ್ದದ್ದೆಲ್ಲವನ್ನೂ ಬಿಡದೆ ನೆಕ್ಕುವ ಬೆಂಕಿಯ ನಿಷ್ಠುರತೆ ತೋರುವ ಅಲ್ಲಮಪ್ರಭುವಿನಂತೆ ನಿಜ ಹೇಳುವ ಸಾಧ್ಯತೆ ಎಲ್ಲರಿಗೂ ಸದಾ ಇರುವುದಿಲ್ಲವೇನೊ ಅಂಥದ್ದರಲ್ಲಿ ವಾದಪ್ರಧಾನವಾದ ಪತ್ರಿಕೋದ್ಯ ದಲ್ಲಿ ಸುಳ್ಳು ಇಣುಕುವುದಿಲ್ಲವೆಂದರೆ ಹೇಗೆ! ತಮ ಬೇಕಾದ ವಾದ ರೂಪಿಸುವವರೆಲ್ಲರೂ ಒಂದಥ ದಲ್ಲಿ ಸುಳ್ಳು ಹೇಳುತ್ತಲೇ ಇರುತ್ತಾರೆ. ಅಂದರೆ ಎ ಸಂಕಥನಗಳಲ್ಲಿ, ಅಧಿಕಾರಸ್ಥ ಭಾಷೆಗಳ ಡಿಸ್ಕೋರ್ಸ್‌ಗಳಲ್ಲಿ ಒಂದು ಮಟ್ಟದ 'ಸುಳ್ಳು' ಇ ಇರುತ್ತದೆ...

(ಇದೇ ಲೇಖಕರ ಮುಂಬರಲಿರುವ ಪುಸ್ತಕವೊಂದರಿಂದ)

---

# ದೇವರಿಗೆ ಆತ ಮತ್ತೇನು ಬರೆದ ಗೊತ್ತಾ?

ಒಂದು ಸಲ ಒಬ್ಬ ಬಡವ ದೇವರಿಗೆ ಒಂದು ಕಾಗದ ಬರೆದನಂತೆ: 'ದೇವರೇ, ನನಗೆ ನೂರು ರೂಪಾಯಿ ಬೇಕಾಗಿದೆ. ದಯವಿಟ್ಟು ಕಳಿಸು' ಅಂತ. ಕಾಗದದ ಮೇಲೆ 'ಸ್ವರ್ಗದಲ್ಲಿರುವ ದೇವರಿಗೆ' ಅಂತ ವಿಳಾಸ ಬರೆದು ಅಂಚೆಪೆಟ್ಟಿಗೆಯಲ್ಲಿ ಹಾಕಿದನಂತೆ.

ಪೋಸ್ಟಾಫೀಸಿನವರು ಆ ಕಾಗದವನ್ನು ನೋಡಿ ನಕ್ಕು 'ನಮ್ಮ ರಾಜ್ಯದಲ್ಲಿ ಎಂತೆಂಥವರಿದ್ದಾರೆ ಎಂಬುದನ್ನು ನಮ್ಮ ದೊರೆಗಳು ತಿಳಿಯಲಿ. ಅದೂ ಅಲ್ಲದೆ, ರಾಜಾ ಪ್ರತ್ಯಕ್ಷ ದೇವತಾ ಎಂದು ಹಿರಿಯರು ಹೇಳುತ್ತಾರಲ್ಲವೆ!' ಎಂದು ಅದನ್ನು ಆ ಊರಿನ ರಾಜನಿಗೆ ರವಾನಿಸಿದರು.

ರಾಜನೂ, ಮಂತ್ರಿಯೂ, ಪರಿವಾರದವರೂ ಆ ಬಡವನ ಕಾಗದವನ್ನು ಓದಿ ಓದಿ ನಕ್ಕು ನಕ್ಕು ಸುಸ್ತಾದರು. ಸುಧಾರಿಸಿಕೊಂಡ ಮೇಲೆ ದೊರೆ ಹೇಳಿದ: 'ಮಂತ್ರಿ, ಆ ಬಡವನಿಗೆ ನೂರು ರೂಪಾಯಿ ಕಳಿಸಿಬಿಡು.'

ಮಂತ್ರಿ ಹೇಳಿದ: 'ಪ್ರಭುವೇ, ಅವನೇ ನೂರು ಕೇಳಿರುವಾಗ ನಾವು ಪೂರ್ತಿ ನೂರನ್ನು ಕಳಿಸುವುದು ನೀತಿಯಲ್ಲ. ಹೀಗೆ ಕೇಳಿದವರಿಗೆಲ್ಲ ಅವರವರು ಕೇಳಿದಷ್ಟನ್ನೂ ಕಳಿಸಿದರೆ, ಬಹುಬೇಗ ಬೊಕ್ಕಸ ಬರಿದಾಗುತ್ತದೆ. ಆದ್ದರಿಂದ ಅವನಿಗೆ ಐವತ್ತು ಕಳಿಸೋಣ, ಸಾಕು.'

'ಹಾಗೆಯೇ ಮಾಡು' ಎಂದ ರಾಜ. ಮಂತ್ರಿ ಆ ಬಡವನಿಗೆ ಅರಸರ ಹೆಸರಿನಲ್ಲಿ ಐವತ್ತು ರೂಪಾಯಿ ಕಳಿಸಿದ. ಬಡವ ಅದನ್ನು ಮಾತಿಲ್ಲದೆ ತೆಗೆದುಕೊಂಡ. ದೇವರಿಗೆ ಅದೇ ರಾತ್ರಿ ಮತ್ತೊಂದು ಕಾಗದ ಬರೆದ: 'ದೇವರೇ, ನನ್ನ ಕಾಗದಕ್ಕೆ ನೀನು ಕೂಡಲೇ ಉತ್ತರ ಕೊಟ್ಟದ್ದು ತುಂಬ ಸಂತೋಷ. ಆದರೆ ದೇವರೇ, ಇನ್ನು ಮುಂದೆ ನೀನು ಹೀಗೆ ಏನಾದರೂ ಹಣ ಕಳಿಸುವುದಾದರೆ, ನೇರವಾಗಿ ನನಗೇ ಕಳಿಸು. ಈ ದೊರೆಯ ಮೂಲಕ ಕಳಿಸಬೇಡ. ಅವನು ನನಗೆ ಐವತ್ತು ಮಾತ್ರ ಕೊಟ್ಟಿದ್ದಾನೆ.'

●

# ಉದ್ದೇಶ ಬದಲಾಗಿದೆ

❑ ಆರ್. ವಿ. ಭಂಡಾರಿ

ರಾಯರು ತಮ್ಮ ಬಾಲ್ಯಜೀವನಕ್ಕೆ ಒಮ್ಮೆಲೇ ಮರಚಿಕೊಂಡರೊ ಎಂಬಂತೆ ನೋಡಿದರು.

ಅರೆಅಂಗಡಿಯಲ್ಲಿ ನಿಂತು ಉತ್ತರಕ್ಕೆ ನೋಡಿದರೆ ಮಳೆಗಾಲದ ಮೋಡಗಳನ್ನೇ ಹೊದೆದು ಕೂತಂತೆ ಕಾಣುವ ಕರಿಕಾನಮ್ಮನ ಗುಡ್ಡ. 'ಕರಿಕಾನು, ಎಂದರೆ ಕರಿಕಾನು. ಸೂರ್ಯನ ರಶ್ಮಿಯೂ ತಳ ಕಾಣದು. ಅಂಥ ಗ್ಗಾಡು. ಹಗಲು ಹೊತ್ತಿನಲ್ಲೇ ಹುಲಿಯ ಗರ್ಜನೆ. ಆನೆಯೂ ಉಂಟಂತೆ. ತಾವು ನೋಡಿದ್ದಿಲ್ಲ. ಹೆಬ್ಬಾವು ಉಂಟೇ ಉಂಟು. ಇಂಥ ಬೆಟ್ಟದ ಶಿಖರದಲ್ಲಿ 'ಕರಿಕಾನಮ್ಮನ ದೇಗುಲ. ಜನರಲ್ಲಿ ದೇವರ ಕುರಿತು ಶ್ರದ್ಧಾಭಕ್ತಿ ತುಂಬಿದ ದಿನಗಳವು. ಕೆರೆಕೋಣು, ಸಾಲಕೋಡು, ಹೊಸಾಕುಳಿ, ನೀಲಕೋಡು ಕಡ್ಲೆ- ವಂದೂರು ಹೀಗೆ ಒಂದೊಂದೂರಿನ ಜನವೆಲ್ಲ ಸೇರಿ ವರ್ಷಕ್ಕೆ ಒಂದು ಸಲ ದೊಡ್ಡ 'ದೇವಕಾರ್ಯ' ನಡೆಸುತ್ತಿದ್ದರು. ಬ್ರಾಹ್ಮಣರಾದರೆ ಮನೆಗೆ ನಾಲ್ಕು ಸಿದ್ದೆ ಅಕ್ಕಿ, ಎರಡು ರೂಪಾಯಿ; ಶೂದ್ರರಾದರೆ ಒಂದು ಸಿದ್ದೆ ಅಕ್ಕಿ, ನಾಲ್ಕಾಣೆ ವಂತಿಗೆ. ಊರ ದೇವಸ್ಥಾನದ ಕಸಮುಸುರೆ ತಿಕ್ಕಿ, ದೋಳು ಬಡಿಯುವ ಭಂಡಾರಿ ಊರಿಗೆಲ್ಲ ಸುದ್ದಿ ಮುಟ್ಟಿಸುತ್ತಿದ್ದ. ಶೂದ್ರರು ಅಂಗಳ ಒಳಗೂ ಬರಕೂಡದು. ಅದರಲ್ಲಿ ಭಂಡಾರಿಗೆ ಮಾತ್ರ ರಿಯಾಯಿತಿ. ಪೂಜೆ ಆದ ಮೇಲೆ ಪೂಜಾರಿ 'ಅಮ್ಮ' ಮೈಮೇಲೆ ಬಂದು ಊರಿನಲ್ಲಿ ಶ್ರದ್ಧಾಭಕ್ತಿ ಕಡಿಮೆಯಾಗಿದೆ. ಹೀಗೇ ಆದರೆ ಹನ್ನೊಂದು ಬಂಡಿಯನ್ನು ಹೊರಡಿಸುತ್ತೇನೆ. ಮೈಲಿ, ಸಿಡುಬು ಹಬ್ಬಿಸಿ ಊರನ್ನೇ ನಾಶ ಮಾಡಿಬಿಡುತ್ತೇನೆ ಎಂದು ಕೂಗುತ್ತಿದ್ದ. 'ಸಮಾಧಾನ ಮಾಡಿಕೊಳ್ಳಬೇಕು. ಮಕ್ಕಳು ಹೂವು ಕೊಡುವಲ್ಲಿ ಹೂವಿನ ಎಸಳು ಕೊಟ್ಟಿದ್ದೇವೆ' ಎಂದು ಮೊಕ್ತೇಸರ ಸಮಾಧಾನ ಪಡಿಸಿ ಪ್ರಸಾದ ತೆಗೆದುಕೊಳ್ಳುತ್ತಿದ್ದ.

ಊರಿನಲ್ಲಿ ಮಲೇರಿಯಾ. ಎಲ್ಲಿ ನೋಡಿದರೂ ಕೈಕಾಲು ಶಣತು ಹೋಗಿ (ಕಡ್ಡಿಯಾಗಿ) ಹೊಟ್ಟೆ ಮಾತ್ರ ಉಬ್ಬಿ ವಿಕಾರವಾಗಿ ಕಾಣುವ ಮಕ್ಕಳು. 'ಬಾರಿಜೆರ' ಎಂದು ಅದಕ್ಕೆ ಹೆಸರು. 'ಬಾರಿ' ಎಂದರೆ ಜ್ವರ ಬಿಟ್ಟು ಬಿಟ್ಟು ಎರಡು ಮೂರು ದಿನಕ್ಕೊಮ್ಮೆ ಬರುವುದು ಎಂದು. 'ಬಾರಿಜೆರ' ಬಂತೆಂದರೆ ಬಡೂನ ಗೋವಿಂದ ಹೆಗಡೆಯೇ ಗತಿ. ಅವರು ಜ್ವರ ಕಟ್ಟುತ್ತಿದ್ದರು. ಯಾವುದೋ ಬಳ್ಳಿಯನ್ನು ಮಂತ್ರಿಸಿ ತೋಳಿಗೆ ಕಟ್ಟಿದ ಕೆಲ ದಿನಗಳಲ್ಲಿ ಜ್ವರ ಬಿಡುತ್ತದೆ. ಸಾತ್ವಿಕ ಬ್ರಾಹ್ಮಣ. ಯಾರಿಂದಲೂ ಪೈಸೆ ತೆಗೆದುಕೊಳ್ಳದೆ ದೇವರ ಮೇಲಿನ ಶ್ರದ್ಧೆಯಿಂದ ಮಾಡುತ್ತಿದ್ದರು.

ಆಗಲೇ ಬಂತಪ್ಪ ದಾಕು (ದೇವಿ) ಹಾಕುವುದು. ಎಲ್ಲರೂ ದಾಕು ಹಾಕಿಸಿಕೊಳ್ಳಬೇಕು. ಕೇವಲ ಮೂರುದಿನ ಜ್ವರ ಬಂದು ಬಿಟ್ಟುಹೋಗುತ್ತದೆ. ಮತ್ತೆ ಜನ್ಮದಲ್ಲಿ ಬರಲಾರದು. -ಪ್ರಚಾರ ಅಬ್ಬಬ್ಬ! ಇಂಥದ್ದನ್ನೆಲ್ಲ ನಂಬುತ್ತಾರೆಯೇ? ಮತ್ತೆ ಮನೆಗೆ ಡಿ.ಡಿ.ಟಿ ಹೊಡೆಯುವುದು. ಡಿ.ಡಿ.ಟಿ. ಹೊಡೆವವರು ಬರುತ್ತಾರೆಂದರೆ ಮನೆಗೇ ಬಾಗಿಲು ಹಾಕಿ ಕೆಲಸಕ್ಕೆಂದು ನೆಪಮಾಡಿ ಹೊರಟು ಬಿಡುತ್ತಿದ್ದರು ಜನ. ಊರಭಟ್ಟರ ಮನೆಯಲ್ಲಿ ಡಿ.ಡಿ.ಟಿ ಹೊಡೆಸಿದರೆಂದರೆ ಉಳಿದವರಿಗೆ ತುಸು ಕುತೂಹಲ. ಅದೂ ಹೊರಮಾಡಿಗೆ ಮಾತ್ರ ಹೊಡೆಸುತ್ತಿದ್ದರು. ಒಳಗೆಲ್ಲ ಯಾವುಯಾವುದೋ ಜಾತಿಯ ಜನವನ್ನು ಬಿಟ್ಟುಕೊಳ್ಳುತ್ತಿರಲಿಲ್ಲ.

ನಮ್ಮ ಊರಿನ ಶಾಲೆಯ ಧಾರೇಶ್ವರ ಮಾಸ್ತರು ಪ್ರಸಿದ್ಧರು. ಶಾರದಾ ಪೂಜೆ ದಿನ ಕಪ್ಪು ಹಲಗೆಯ ಮೇಲೆ

ಖಡು (ಸೀಮೆಸುಣ್ಣ)ವಿನಿಂದಲೇ ದೊಡ್ಡದಾದ ಸರಸ್ವತಿ ಚಿತ್ರ ಬಿಡಿಸುತ್ತಿದ್ದರು. ಅವರು ಹೇಳಿದ್ದೇ ಹೇಳಿದ್ದು: ಮಕ್ಕಳೇ ದಾಕು ಹಾಕಿಸಿಕೊಳ್ಳಬೇಕು ಎಲ್ಲರೂ. ಒಂದು ದಿನ ದಾಕು ಹಾಕುವ ಹ್ಯಾಟಿನ ಸಾಹೇಬರು ಬಂದೇ ಬಿಟ್ಟರು. ಮಾಸ್ತರು ಎಲ್ಲರೂ ದಾಕು ಹಾಕಿಸಿಕೊಳ್ಳಬೇಕು. ನೋಡಿ ನಾನು ಹಾಕಿಸಿಕೊಂಡಿದ್ದೇನೆ ಎಂದು ತಮ್ಮ ಎಡತೋಳಿನ ಮೇಲೆ ಇಪ್ಪತ್ತೈದು ಪೈಸೆ ನಾಣ್ಯದ ಹಾಗೆ ಮೂಡಿದ ಮೂರು ಮುದ್ರೆಯನ್ನು ತೋರಿಸುತ್ತಿರುವಾಗಲೇ ಹ್ಯಾಟ್ ಸಾಹೇಬರು ತಾವೇ ತಂದ ಸ್ಟೌವ್ ಉರಿಸಿ ಉಪಕರಣ ಸಿದ್ದಗೊಳಿಸುತ್ತಿದ್ದರು.

ಶಾಲೆಯ ಮಕ್ಕಳಿಗೆಲ್ಲ 'ಒಂದಕ್ಕೆ' ಬಂದು ಓಡಿದ್ದೇ ಓಡಿದ್ದು. ಕೆಲವರನ್ನು ಹಿಡಿದು ತಂದು ಕೋಣೆಗೆ ಬಾಗಿಲು ಹಾಕಿದಾಗ ಗೋಳೀಗೋಳು. ಅವರ ಅಂಥ ಕೆಲಸ ನಡೆಯುತ್ತಿರುವಾಗ ನಾವು ನಾಲ್ಕನೇ ತರಗತಿಯ ಮಕ್ಕಳು ಉಪಾಯ ಹುಡುಕುತ್ತಿದ್ದೆವು. ಪುಣ್ಯ ಶಾಲೆಯ ಎಲ್ಲ ಕಿಟಕಿಗಳಿಗೆ ಕದ ಇದ್ದಿರಲಿಲ್ಲ. ಆ ಕಡೆ ಚುಚ್ಚುವ ಕೆಲಸ ಶುರುವಾದೊಡನೆ ನಾವು ಕೆಲವರು ಕಿಟಕಿಯಿಂದ ಹಾರಿ ಹಿಂದಿನ ಬೆಟ್ಟ ಸೇರಿ, ಅಲ್ಲೂ ಹುಲಿಯ ಭಯದಿಂದ ಮರ ಹತ್ತಿ ಕುಳಿತಿದ್ದೆವು. ಮರಹತ್ತುವುದರಲ್ಲಿ ನಾವು ಕೋಡ(ಗ)ದ ಸಂತಾನದವರಾಗಿದ್ದೆವು. ಮನೆಗೆ ಹೋದರೆ ದಾರಿಯಲ್ಲೊ ಮನೆಯಲ್ಲೊ ಸಿಕ್ಕಿಬೀಳಬಹುದೆಂದು ಊಟಕ್ಕೂ ಹೋಗದೆ ಸಂಜೆ ಮನೆಗೆ ಮರಳಿದೆವು. ನಮ್ಮ ಸಾಹಸಕ್ಕೆ ಮನೆಯವರ ಶಹಬಾಸ್‌ಗಿರಿ!




ಕಾಂಗ್ರೆಸಿನವರು ಬಂದರಪ್ಪ! ನಮ್ಮ ಊರ ಮುಖಂಡರಾದ ವಿನಾಯಕ ಭಟ್ಟರು ಚುನಾವಣೆ ಸಂದರ್ಭದಲ್ಲಿ ಎಂ.ಎಲ್.ಎ. ಯನ್ನು ಕರೆದು ತಂದು ನಿಲ್ಲಿಸಿಬಿಡುತ್ತಿದ್ದರು! ತೆಕಳಿ, ಅವರ ಭಾಷಣ ಶುರು. ಅವರು ಯಕ್ಷಗಾನ, ತಾಳಮದ್ದಳೆ ಅರ್ಥಗಾರರೂ ಆಗಿದ್ದರು. ಭಾಷಣ ಶುರುಮಾಡಿದ ಮೇಲೆ ನಿಲ್ಲಿಸಿದಾಗಲೇ ಮುಕ್ತಾಯ. ನಮ್ಮೂರಿಗೆ ಹೈಸ್ಕೂಲು ಆಗಬೇಕು. ಆಸ್ಪತ್ರೆ ಬೇಕು. ಸಹಕಾರಿ ಸಂಘ ಆಗಬೇಕು. ಪಂಚಾಯತ್ ಕಟ್ಟಡ ಆಗಬೇಕು. ಕರಿಕಾನಮ್ಮನ ಗುಡಿಗೆ ರಸ್ತೆಯಾಗಬೇಕು. ಅದನ್ನು ಕೇಳಿಯೇ ನಮಗೆ ರೋಮಾಂಚನ!

ಹೆಣ್ಣು ಮಕ್ಕಳನ್ನು ಶಾಲೆಗೆ ಕಳಿಸಬೇಕು. ಸರಕಾರದ ಪ್ರೋತ್ಸಾಹ. ಆಗ ನಮಗೆ ವರ್ಷಕ್ಕೆ ಎರಡೂವರೆ ಆಣೆ (ಈಗಿನ ಹದಿಮೂರು ಪೈಸೆ) ಶುಲ್ಕ. ಹೆಣ್ಣು ಮಕ್ಕಳಿಗೆ ಅದೂ ಇಲ್ಲ. ವರ್ಷಕ್ಕೆ ಒಂದು ಜೊತೆ ವಸ್ತ್ರ ಬೇರೆ! ಯಾವನೋ ಒಬ್ಬ ಅಧಿಕಾರಿ ಬಂದಿದ್ದ. ಹೈಸ್ಕೂಲಿನಲ್ಲಿ ಹೆಣ್ಣು ಮಕ್ಕಳು ಹೆಚ್ಚಿಗೆ ಬರುವಂತಾದರೆ ಶಾಲೆಗೆ ಹೆಚ್ಚು ಗ್ರ್ಯಾಂಟ್ ಕೊಡಲಾಗುವುದು ಎಂದ.

ನಮಗೆ ಹೈಸ್ಕೂಲು ಶಿಕ್ಷಣ ಇಲ್ಲ. ನಾಲ್ಕನೆಯ ತರಗತಿಗೇ ಮುಕ್ತಾಯ. ಆಗಿನ ನಾಲ್ಕನೇಯತ್ತೆ ಆಗಿದ್ದರೂ ಮಜಬೂತೇ ಆಗಿತ್ತು. ಯಕ್ಷಗಾನ ಪ್ರಸಂಗದಲ್ಲಿ ಅರ್ಥ ಹೇಳುವ ಹುಚ್ಚಿಗೆ ವಚನ ಭಾರತ, ಕುಮಾರವ್ಯಾಸ ಭಾರತ ಓದುವ ಮಟ್ಟಿಗೂ ಬೆಳೆದಿತ್ತು. ಊರಿಗೆ ಇಂಗ್ಲಿಷ್ ಸ್ಕೂಲೂ ಬಂತು. 'ಕರಿಕಾನ ಪರಮೇಶ್ವರಿ ವಿದ್ಯಾಮಂದಿರ'ದ ಮಕ್ಕಳು ಪ್ರತಿವರ್ಷ 'ತಿಂಗಳ ಸರತಿ' ಹತ್ತಿರ ಬಂದ ಹೆಣ್ಣು ಮಕ್ಕಳನ್ನು ಮಾತ್ರ ಬಿಟ್ಟು ಉಳಿದೆಲ್ಲವರೂ ಪರೀಕ್ಷೆಗೆ

ಮುನ್ನ ದೇವಸ್ಥಾನಕ್ಕೆ ಹೋಗಿ ಪೂಜೆ ಸಲ್ಲಿಸಿ ಬರುವುದು ರೂಢಿ. ಆ ನಂತರದ ವರ್ಷಗಳಲ್ಲಿ ಕೆಲವು ವಿದ್ಯಾರ್ಥಿಗಳು 'ನಾವು ಬರುವುದಿಲ್ಲ ಸರ್, ಅಲ್ಲಿ ಬ್ರಾಹ್ಮಣರಿಗೇ ಬೇರೆ, ಶೂದ್ರರಿಗೇ ಬೇರೆ ಪಂಕ್ತಿ ಭೇದ ಮಾಡುತ್ತಾರೆ' ಎಂದರಂತೆ. ಮುಟ್ಟ ಬಾರದ ಜಾತಿಯವರಂತೂ ಹೋಗುತ್ತಿರಲಿಲ್ಲವಲ್ಲ. ಈಗ ಅಲ್ಲಿಗೆ ಪರೀಕ್ಷೆಯಲ್ಲಿ ನಪಾಸಾಗುವ ವಿದ್ಯಾರ್ಥಿಗಳು ಮಾತ್ರ ಹೋಗುತ್ತಾರೆ!

ಊರ ದೇವಸ್ಥಾನದಲ್ಲಿ ಪ್ರತಿ ವರ್ಷವೂ ಭಜನಾ ಸಪ್ತಾಹ. ಹಗಲು ರಾತ್ರಿ ಭಜನೆ, ಭಜನೆ ಎಂದರೆ ಭಜನೆ. ಭಕ್ತಿಯಿಂದ ಒದರಿದರೂ ದೇವರಿಗೆ ಪ್ರಿಯವೆ. ಶ್ರದ್ಧೆ ಮುಖ್ಯ. ಬ್ರಾಹ್ಮಣರು ಭಜನೆಗೆ ಕೂಡ್ರು, ಚಾಪೆಯ ಮೇಲೆ ತಬಲಾ ಬಾರಿಸುವ ಭಂಡಾರಿ ಕೂಡ್ರಲಾಗದು. ಏಳು ದಿನಗಳ ನಂತರ ದೇವಕಾರ್ಯ. ಭರ್ಜರಿ ಪೂಜೆ, ನೈವೇದ್ಯ. ಊಟಮಾಡಿ ಉಳಿದದ್ದರಲ್ಲಿ ಭಂಡಾರಿಗಳಿಗೆ ಭರ್ಜರಿ ಊಟ, ಮೂರು ನಾಲ್ಕು ದಿನ ಸಾಕಾಗುವಷ್ಟು.

ಮಗ ತನ್ನ ಮಗಳ ಜವಾಬ್ದಾರಿಯನ್ನು ನನ್ನ ಮೇಲೆ ಬಿಟ್ಟಿರುವುದರಿಂದ ಅವಳಿಗೆ ವಿದ್ಯಾಭ್ಯಾಸ ಮಾಡಿಸಿದವನು ನಾನೇ. ಅವಳಿಗೂ 'ಅಜ್ಜ' ಎಂದರೆ ಬಹುಪ್ರಿಯ. ಚೆಂದದ ಹುಡುಗಿ. ಥೇಟ್ ಅಜ್ಜಿಯ ಹಾಗೆ. ಓಡಾಡಿದರೆ ಅಜ್ಜಿಯೇ ಪ್ರಾಯದಲ್ಲಿ ಓಡಾಡಿದಂತೆ.

ಕಾಲೇಜಿಗೆ ಹೋಗುತ್ತೇನೆ ಎಂದಳು. ಹೋಗು ಮೊಮ್ಮಗಳೇ ಎಂದೆ. ಅದು ಮುಗಿಯಿತು. ಕಲಿತದ್ದು ಸಾಕು ಮೊಮ್ಮಗಳೇ ಎಂದೆ. ಅಜ್ಜಾ ರ್‍ಯಾಂಕು ಬಂದಿದ್ದೇನೆ, ಮುಂದೆ ಓದಬೇಕು ಎಂದಳು. ನನ್ನ ಅಕ್ಕನನ್ನು ಕಂಡು ತುಸು ಬುದ್ಧಿ ಹೇಳು ಅಕ್ಕಾ ಎಂದೆ. ನನ್ನ ಅಕ್ಕನ ಮನೆ ಸಮೀಪವೇ. ನನ್ನನ್ನು ಇತರ ನಾಲ್ಕು ಮಂದಿಯನ್ನು ಬಾಲ್ಯದಿಂದ ನೋಡಿಕೊಂಡವಳು ಅವಳು- ತಾಯಿಯ ಸಂಗಡ. ಯಕ್ಷಗಾನ ಹೇಳುತ್ತೇನಾದ್ದರಿಂದ ನನ್ನಲ್ಲಿ ಅವಳಿಗೆ ಪ್ರೀತಿ ತುಸು ಹೆಚ್ಚೇ. 'ಕಲಿಯಲಿ ಬಿಡು ರಾಯಪ್ಪ' ಎಂದಳು. ಅದೂ ಆಯಿತು.

ಹುಡುಗ ಅಮೆರಿಕಾದಲ್ಲಿದ್ದಾನೆ. ಅರಸಿದರೂ ಸಿಕ್ಕದಂಥ ಉತ್ತಮ ಸಂಬಂಧ. ಆಗಿಬಿಡು ಎಂದೆ. ಇಲ್ಲ, ಪಿ ಹೆಚ್. ಡಿ. ಮಾಡಬೇಕು ಎಂದಳು. ಅಕ್ಕನನ್ನು ಕಂಡು ಅವಳಿಗೆ ತುಸು ಬುದ್ಧಿ ಹೇಳು ಎಂದೆ. ಅವಳಿಗೇ ಅಷ್ಟು ಆಸಕ್ತಿ ಇದ್ದರೆ ನಿನಗೇನು ವರಾತ ಎಂದಳು. ತುಂಬ ಖೇದವಾಯಿತು. ಅಕ್ಕನ ಮೇಲೂ ಸಿಟ್ಟು ಬಂತು.

ಕೋಣೆಯನ್ನು ಗುಡಿಸುವಾಗ ಇದು ಸಿಕ್ಕಿತು ಎಂದು ಅವಳಿಲ್ಲದ್ದರಿಂದ ಲಿಂಗ ನನಗೇ ಕೊಟ್ಟ. ನೀನೇ ನೋಡು ಎಂದೆ.

'ಪ್ರಿಯ ಮಾಲತಿ, ನನಗೆ ಸೀಟು ಸಿಕ್ಕಲಿಲ್ಲ. ನೀನು ರ್‍ಯಾಂಕ್ ವಿದ್ಯಾರ್ಥಿ. ತೊಂದರೆ ಆಗಲಾರದು. ಇದ್ದಾಗ ಸುಖವಾಗಿ ಇದ್ದೆವು. ಇನ್ನು ನಮ್ಮ ದಾರಿ ಬೇರೆ ಬೇರೆ. ನೆನಪನ್ನು ಹತ್ತಿಕ್ಕುವುದು ಕಷ್ಟ. 'ಚಿಗುರಗೊಡುವುದು ಬೇಡ' ಎಂದು ನೀನೇ ಹೇಳಿದ ಮಾತನ್ನು ಉಳಿಸಿಕೊಳ್ಳುವ - ನೆನಪನ್ನು ಹುಗಿದು ಹಾಕಿ.'

'ರಾಯಪ್ಪ ನನಗೇನನ್ನಿಸುತ್ತದೆ ಗೊತ್ತಾ? ಹೆಂಗಸರ ವಿಷಯದಲ್ಲಿ ನಿಸರ್ಗವೇ ವಂಚಿಸಿ ಬಿಟ್ಟಿದೆಯೇನೊ.'

'ಏನು ಹಾಗಂದರೆ?'

'ಎಷ್ಟು ವರ್ಷ ವ್ಯರ್ಥವಾಗಿಬಿಡುತ್ತದೆ!'

'ಅದಕ್ಕೆಂದೇ ಮದುವೆಯಾಗು ಎಂದದ್ದು. ಅವಳಿಗೆ ತುಸು ಬುದ್ಧಿ ಹೇಳು.'

ಹೇಳಿದ ರಾಯಪ್ಪ. 'ಅವಳು ಸರಿಯಾಗೇ ಇದ್ದಾಳೆ. ಅವಳೇನೆಂದಳು ಗೊತ್ತಾ?'

ನಾನು ಕುತೂಹಲಿಯಾಗಿದ್ದೆ ಕೇಳಲು.

'ಅಜ್ಜೀ, ಮೊದಲಾದರೆ 'ಮದುವೆ' ಮಾತ್ರ ಎಂದಾಗಿತ್ತು. ಈಗ ಉದ್ದೇಶ ಬದಲಾಗಿದೆ.'

ಬದಲಾಗಿದೆ! ಬದಲಾವಣೆ ದೇವರು ಧರ್ಮದ ಮೇಲಿನ ಶ್ರದ್ಧಾಭಕ್ತಿ ಕಡಿಮೆ ಆದುದರಿಂದ ಆಯಿತೋ ಅಥವಾ ಬದಲಾವಣೆಯಿಂದ ಶ್ರದ್ಧಾಭಕ್ತಿ ಕಡಿಮೆ ಆಯಿತೋ ಎಂಬ ಗಾಢವಾದ ತಳಮಳದಲ್ಲಿ ಮುಳುಗಿದರು ರಾಯರು.



---

ಆರ್. ವಿ. ಭಂಡಾರಿ, ಕೆರೆಕೋಣ, ಅಂಚೆ: ಅರೆಅಂಗಡಿ, ಹೊನ್ನಾವರ, ಉ.ಕ. -581430

ಉಲ್ಲೇಖ

# ತೆರೆದ ಮನ - ಕನ್ನಡಿಗನ ಗುಣ

ಇಂಗ್ಲಿಷ್ ಮೂಲ : ರಾಮಚಂದ್ರ ಗುಹಾ

ಕನ್ನಡಕ್ಕೆ: ಯಾಜ್ಞವಲ್ಕ್ಯ

ಏಳು ಮಂದಿ ಕನ್ನಡದ ಸಾಹಿತಿಗಳಿಗೆ ಇದುವರೆಗೆ ಜ್ಞಾನಪೀಠ ಪ್ರಶಸ್ತಿ ಲಭ್ಯವಾಗಿದೆ. ಈ ದಾಖಲೆಯನ್ನು ಸರಿಗಟ್ಟಿರುವುದು ಹಿಂದಿ ಭಾಷೆಯೊಂದೇ. ಈ ಭಾಷೆಯಲ್ಲಿ ಬರೆದು ಜ್ಞಾನಪೀಠ ಗಳಿಸಿದ ಬಹುಮಂದಿಗೆ ಹಿಂದಿ ಆಡುಭಾಷೆ. ಕನ್ನಡದ ಏಳು ಮಂದಿ ಜ್ಞಾನಪೀಠ ಪ್ರಶಸ್ತಿ ಪುರಸ್ಕೃತರ ಪೈಕಿ ಮೂರು ಮಂದಿ ಕನ್ನಡ ಮಾತನಾಡುತ್ತ ಬೆಳೆದವರಲ್ಲ. ಬೇಂದ್ರೆಯವರ ಮಾತೃಭಾಷೆ ಮರಾಠಿ, ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರದು ತಮಿಳು. ಗಿರೀಶ್ ಕಾರ್ನಾಡ್ ತಮ್ಮ ಅಪ್ಪ ಅಮ್ಮನೊಂದಿಗೆ ಮಾತನಾಡುತ್ತಿದ್ದುದು ಕೊಂಕಣಿ. ಇನ್ನುಳಿದ ನಾಲ್ಕು ಮಂದಿ ಅಧಿಕೃತವಾಗಿ ಕನ್ನಡಿಗರು. ವಿ.ಕೃ. ಗೋಕಾಕ್ ಮತ್ತು ಯು.ಆರ್. ಅನಂತಮೂರ್ತಿ ವೃತ್ತಿಯಿಂದ ಇಂಗ್ಲಿಷ್ ಬೋಧಕರು. ಪಶ್ಚಿಮ ಕರಾವಳಿಯಲ್ಲಿ ಹುಟ್ಟಿ ಬೆಳೆದ ಶಿವರಾಮ ಕಾರಂತರು ಕನ್ನಡದಷ್ಟೇ ತುಳು, ಕೊಂಕಣಿಯನ್ನು ಕೇಳಿಸಿಕೊಂಡವರು, ಮಾತನಾಡಿದವರು. ಆದರೆ ಕನ್ನಡ ಭಾಷೆಯನ್ನು ಮನೆಯಲ್ಲಿ, ಬೀದಿಯಲ್ಲಿ, ಕಾಲೇಜಿನಲ್ಲಿ ಬಳಸಿದವರು ಕವಿ ಕುವೆಂಪು ಒಬ್ಬರೇ.

ಇತರೆ ಕ್ಷೇತ್ರಗಳೂ ಇದಕ್ಕೆ ಹೊರತಲ್ಲ. ಇದಕ್ಕೆ ನಿದರ್ಶನ ಕ್ರಿಕೆಟ್. ಭಾರತೀಯ ಕ್ರಿಕೆಟ್‌ಗೆ ಮುಂಬೈ ನೀಡಿದ ಕೊಡುಗೆ ಮಹತ್ವದ್ದು. ನಂತರದ ಸ್ಥಾನ ಕರ್ನಾಟಕದ್ದು. ಈ ವಿಷಯದಲ್ಲಿ ಪ್ರಾದೇಶಿಕತೆ ಅಡ್ಡ ಬಂದಿಲ್ಲ. ಕರ್ನಾಟಕ ರಾಜ್ಯ ಕ್ರಿಕೆಟ್ ಸಂಸ್ಥೆಯ ಕಾರ್ಯದರ್ಶಿ ಬ್ರಿಜೇಶ್ ಪಟೇಲ್ ಗುಜರಾತಿ. ರಾಜ್ಯ ರಣಜಿತಂಡದ ನಾಯಕ ರಾಹುಲ್ ದ್ರಾವಿಡ್ ಮರಾಠಿ ಭಾಷಿಗರು. ಆಯ್ಕೆ ಸಮಿತಿಯಲ್ಲಿರುವ ಸೈಯದ್ ಕೀರ್ಮಾನಿ ದಕ್ಕನಿ ಭಾಷೆ ಮಾತನಾಡುವ ಮುಸ್ಲಿಂ. ಅತ್ಯುತ್ತಮ ಕ್ರಿಕೆಟ್ ಆಟಗಾರರೆಲ್ಲ ತಮಿಳಿಗರು ಹಾಗೂ ಆಂಗ್ಲೋ ಇಂಡಿಯನ್ನರು. ಕರ್ನಾಟಕದ ಕ್ರಿಕೆಟ್ ತರಬೇತುದಾರ ಕೆ. ಕೆ. ತಾರಾಪೂರ್ ಒಬ್ಬ ಪಾರ್ಸಿ. ಇವರ ಕೈಯಲ್ಲಿ ತರಬೇತಿ ಪಡೆದ ಸೈಯದ್ ಕೀರ್ಮಾನಿ, ಸದಾನಂದ ವಿಶ್ವನಾಥ್, ರೋಜರ್ ಬಿನ್ನಿ- ಇವರ ಹಾಗೂ ವಿಶ್ವನಾಥ್, ಪ್ರಸನ್ನ ಚಂದ್ರಶೇಖರ್, ಕುಂಬ್ಳೆ ನಡುವೆ ಯಾರೂ ಭೇದವೆಣಿಸಲಿಲ್ಲ. ಅನ್ಯರಂತೆ ಕಾಣಲಿಲ್ಲ.

ಕಳೆದ ಮೂವತ್ತು ವರ್ಷಗಳಿಂದ ನಾನು ಕಂಡಂತೆ, ಯಾರೂ ಪ್ರಾದೇಶಿಕ ಭಾವನೆಯಿಂದ ಕ್ರಿಕೆಟ್ ಆಟವನ್ನು ನೋಡಿಲ್ಲ. ತಮಿಳುನಾಡು ಹಾಗೂ ಬಾಂಬೆಯ ಡ್ರೆಸಿಂಗ್ ರೂಮ್‌ಗಳಲ್ಲಿ ಈ ಪ್ರಾದೇಶಿಕ ಭಾವನೆ ದಟ್ಟವಾಗಿರುವುದನ್ನು ಗಮನಿಸಿದ್ದೇನೆ. ಅವರು ತಮ್ಮ ಭಾಷಿಗರಲ್ಲದವರನ್ನು ಹೊರಗಿನವರಂತೆ ಕಾಣುತ್ತಾರೆ. ಆದರೆ ಕರ್ನಾಟಕದ ಡ್ರೆಸ್ಸಿಂಗ್ ರೂಂ ಈ ವಿಷಯದಲ್ಲಿ ಹೊರತಾದುದು.

ದೇಶಪ್ರೇಮಿ ಭಾರತೀಯನಾಗಿರಲು ಹಿಂದೂ ಆಗಿರುವುದು ಹೇಗೆ ಅನಗತ್ಯವೋ, ಹಾಗೆಯೇ ಕರ್ನಾಟಕದ ಗೌರವಾನ್ವಿತ ನಿವಾಸಿಯಾಗಿರಲು ಅವನು ಕನ್ನಡಿಗನಾಗಿರುವುದೂ ಅನಗತ್ಯ. ಭಾರತೀಯ ರಾಷ್ಟ್ರೀಯತೆಗೆ ಪರಕೀಯತೆ ಹೇಗೆ ಅಡ್ಡಿಯಾಗುವುದಿಲ್ಲವೋ ಹಾಗೆ ಕನ್ನಡದ ಶ್ರೇಷ್ಠರೆಲ್ಲ ಹೊರಗಿನ ಪ್ರಭಾವಗಳಿಗೆ ಮುಕ್ತವಾಗಿ ತಮ್ಮನ್ನು ತೆರೆದುಕೊಂಡವರು. ಇದರರ್ಥ ಅವರಿಗೆ ಶತಮಾನಗಳ ಇತಿಹಾಸ ಪ್ರಭಾವವಿರುವ ತಮ್ಮ ಭಾಷೆ, ಸಂಸ್ಕೃತಿಯ ಬಗ್ಗೆ ಗೌರವ ಇಲ್ಲವೆಂದಲ್ಲ. ರಾಜ್ಯದ ಪಶ್ಚಿಮ ಭಾಗದಲ್ಲಿ ಗೀತ,

---

ರಾಮಚಂದ್ರ ಗುಹಾ ನಮ್ಮ ನಡುವಿನ ಇಂದಿನ ಶ್ರೇಷ್ಠ ಚಿಂತಕರಲ್ಲಿ ಒಬ್ಬರು. ಬೆಂಗಳೂರಿನಲ್ಲಿ ನೆಲೆಸಿರುವ ಈ ಲೇಖಕ ಸಮಕಾಲೀನ ಸಂಗತಿಗಳನ್ನು ಕುರಿತು ಲೇಖನ- ಪುಸ್ತಕಗಳನ್ನು ಪ್ರಕಟಿಸಿದ್ದಾರೆ.

ನೃತ್ಯದ ವಿಶಿಷ್ಟ ಪ್ರಕಾರವಾದ ಯಕ್ಷಗಾನ ಜೀವಂತವಾಗಿದೆ. ಉತ್ತರದಲ್ಲಿ ಪಟ್ಟದಕಲ್ಲು ಐಹೊಳೆಗಳಷ್ಟೇ ಪ್ರಾಮುಖ್ಯವನ್ನು ಗೋಲ್‌ಗುಂಬಜ್, ಹಂಪೆಯ ಭಗ್ನಾವಶೇಷಗಳು ಹೊಂದಿವೆ. ದಕ್ಷಿಣ ಭಾಗದಲ್ಲಿ, ಬೇಲೂರು, ಹಳೇಬೀಡು, ನನಗಿಷ್ಟವಾದ ಸೋಮನಾಥಪುರದ ಶಿಲ್ಪ ವೈಭವವಿದೆ. ಕಲೆ ಮತ್ತು ವಾಸ್ತುಶಿಲ್ಪ ಕ್ಷೇತ್ರದಲ್ಲಿ ಕರ್ನಾಟಕ ದೇಶದಲ್ಲಿ ತನಗೊಂದು ಸ್ಥಾನ ನಿರ್ಮಿಸಿಕೊಂಡಿದೆ. ಪ್ರಕೃತಿ ಆಶೀರ್ವಾದವೂ ಇದೆ. ನಿತ್ಯಹರಿದ್ವರ್ಣದ ಕಾಡು, ಸುಂದರವಾದ ಕರಾವಳಿ ಹರಿಯುವಾಗ ಜುಳುಜುಳುನಾದ ಹೊಮ್ಮಿಸುವ ಕಾವೇರಿ ಎಲ್ಲವೂ ಆಕರ್ಷಣೀಯ. ಇದರಂತೆ ಭಾರತದ ಇತರೆ ಭಾಗಗಳೂ ಕೂಡ ಸುಂದರ. ಅವೂ ಕೂಡ ಕಲೆ, ವಾಸ್ತುಶಿಲ್ಪ, ಪ್ರಕೃತಿಯ ವರದಾನವೇ, ಹಾಗಿದ್ದರೆ ಕರ್ನಾಟಕದ ವೈಶಿಷ್ಟ್ಯವೇನು ಎಂದು ಯೋಚಿಸಿದರೆ, ಎಲ್ಲವನ್ನು ತನ್ನೊಡಲಲ್ಲಿ ತುಂಬಿಕೊಳ್ಳುವ ಸಾಂಸ್ಕೃತಿಕ ಹೃದಯ ವೈಶಾಲ್ಯ. ದೇಶದ ಇತರ ಭಾಗಗಳ ಹಾಗೂ ವಿಶ್ವದ ಎಲ್ಲ ಒಳ್ಳೆಯ ಅಂಶಗಳನ್ನು ಅಪ್ಪಿಕೊಳ್ಳುವ ಹಿರಿತನ.

ಶಿವಮೊಗ್ಗ ಜಿಲ್ಲೆಯ ಹೆಗ್ಗೋಡನ್ನು ನೋಡಿ, ಹಲವು ವರ್ಷಗಳಿಂದ ಇಲ್ಲಿ ಸೃಜನಶೀಲ ಕಲಾ ಕ್ಷೇತ್ರದ ಹಲವು ಅಸಾಧಾರಣ ಪ್ರಯೋಗಗಳು ನಡೆಯುತ್ತಿವೆ. ಕೆಲವು ವರ್ಷಗಳ ಹಿಂದೆ ಕೆ. ವಿ. ಸುಬ್ಬಣ್ಣ ಎಂಬ ಹೆಗ್ಗೋಡಿನ ರೈತ ಕುವೆಂಪು ಜೊತೆ ಕಲಿಯಲು ಮೈಸೂರಿಗೆ ಹೋದರು. ಕಲಿತ ನಂತರ ಹಳ್ಳಿಗೆ ಬಂದು "ಅಕ್ಷರ" ಎಂಬ ಹೆಸರಿನ ಪ್ರಕಟಣಾ ಸಂಸ್ಥೆ ಆರಂಭಿಸಿದರು. ಈ ಸಂಸ್ಥೆ ಕನ್ನಡ ಸಾಹಿತ್ಯದ ಅತ್ಯುತ್ತಮ ಕೃತಿಗಳನ್ನು ಪ್ರಕಟಿಸಿತು. ನಂತರ ಹೆಗ್ಗೋಡಿನಲ್ಲಿ 'ನೀನಾಸಂ' ಎಂಬ ನಾಟಕ ಶಾಲೆ ರೆಪರ್ಟರಿ ಕೂಡ ಆರಂಭವಾಯಿತು. ಯು. ಆರ್. ಅನಂತಮೂರ್ತಿ ಸಹಯೋಗದಲ್ಲಿ ಸುಬ್ಬಣ್ಣ ವಾರ್ಷಿಕ ಸಾಂಸ್ಕೃತಿಕ ಶಿಬಿರವೊಂದನ್ನು ನಡೆಸಲು ಆರಂಭಿಸಿದರು. ಎರಡು ವಾರಗಳ ಈ ಸಾಂಸ್ಕೃತಿಕ ಶಿಬಿರದಲ್ಲಿ ಸಿನಿಮಾ, ರಂಗಭೂಮಿ, ಕಲೆ, ಸಾಹಿತ್ಯ ಹಾಗೂ ರಾಜಕಾರಣದ ಅನೇಕ ಆಯಾಮಗಳ ಕುರಿತ ಚರ್ಚೆ ನಡೆಯುವಂತಾಯಿತು. ಇಪ್ಪತ್ತನೇ ವರ್ಷಕ್ಕೆ ಕಾಲಿಟ್ಟಿರುವ ಈ ಸಾಂಸ್ಕೃತಿಕ ಶಿಬಿರ ಸಂಸ್ಕೃತಿಯ ಪ್ರಜಾತಾಂತ್ರೀಕರಣದ ಒಂದು ಬಹು ಮುಖ್ಯ ಪ್ರಯತ್ನ. ಈ ಶಿಬಿರದಲ್ಲಿ ಉಪಾಧ್ಯಾಯರು, ವಿದ್ಯಾರ್ಥಿಗಳು ಮಾತ್ರವೇ ಅಲ್ಲದೆ ಮರಗೆಲಸ ಮಾಡುವವರೂ, ಮನೆಕಟ್ಟುವವರೂ ಕೂಡ ಭಾಗವಹಿಸುತ್ತಾರೆ. ಸತ್ಯಜಿತ್ ರೇ, ಗೋದಾರ್ದ್ ರಂಥವರ ಚಿತ್ರಗಳನ್ನು ನೋಡುತ್ತಾರೆ. ಫುಕೋ ಸೈದ್‌ರ ಪುಸ್ತಕಗಳನ್ನು ಕುರಿತ ಚರ್ಚೆಯಲ್ಲಿ ಪಾಲ್ಗೊಳ್ಳುತ್ತಾರೆ. ಖ್ಯಾತ ವಿಮರ್ಶಕರು ಇವರನ್ನು ಫುಕೋ ಸೈದ್‌ರನ್ನು ಎಲ್ಲರಿಗೂ ಪರಿಚಯಿಸುತ್ತಾರೆ. ನೀನಾಸಂ ವರ್ಷಂಪ್ರತಿ ಮೂರು ನಾಟಕಗಳನ್ನು ಪ್ರದರ್ಶನಕ್ಕಾಗಿ ಸಿದ್ಧಪಡಿಸುತ್ತದೆ. ಈ ಪೈಕಿ ಒಂದು ಮೂಲ ಕನ್ನಡ ನಾಟಕ, ಇನ್ನೊಂದು ಯಾವುದೇ ಭಾರತೀಯ ಭಾಷೆಯಿಂದ ಕನ್ನಡಕ್ಕೆ ಅನುವಾದಿಸಿದ ನಾಟಕ, ಮತ್ತೊಂದು ಪಾಶ್ಚಿಮಾತ್ಯರು ಬರೆದು ಕನ್ನಡಕ್ಕೆ ಅಳವಡಿಸಿದ್ದು. ಹಾಗಾಗಿ ಪಿ. ಲಂಕೇಶ್, ಮೋಹನ್ ರಾಕೇಶ್, ಆ್ಯಂಟನ್ ಚೆಕಾವ್‌ರ ನಾಟಕಗಳನ್ನು ಪ್ರೇಕ್ಷಕರು ಇಲ್ಲಿ ಸತತವಾಗಿ ಮೂರು ದಿನ ನೋಡಬಹುದು. ಹೆಗ್ಗೋಡಿನ ಪ್ರದರ್ಶನದ ನಂತರ ಈ ತಂಡ ಇಡೀ ರಾಜ್ಯದಲ್ಲಿ ಪ್ರವಾಸ ಮಾಡಿ 150 ಕ್ಕೂ ಹೆಚ್ಚು ಪ್ರದರ್ಶನ ನೀಡುತ್ತದೆ.

ಹೊರ ಜಗತ್ತಿಗೆ ತನ್ನನ್ನು ತೆರೆದುಕೊಂಡು ಅದರೊಂದಿಗೆ ಅನುಸಂಧಾನ ನಡೆಸುವ ನೀನಾಸಂ ಪ್ರಯತ್ನ ಅನನ್ಯ. ಈ ಮುಕ್ತತೆ ಕಲೆ, ಸಂಗೀತ, ಸಾಹಿತ್ಯ, ಕ್ರೀಡೆ ಎಲ್ಲದರಲ್ಲಿಯೂ ಮುಪ್ಪುರಿಗೊಂಡಿದೆ. ಹಾಗೆ ನೋಡಿದರೆ ವಾಣಿಜ್ಯ ಕ್ಷೇತ್ರಕ್ಕೂ ಮುಕ್ತವಾಗಿ ತೆರೆದುಕೊಳ್ಳುವಿಕೆ ಹೊರತಾಗಿಲ್ಲ. ಸಾಫ್ಟ್‌ವೇರ್ ಉದ್ಯಮದಲ್ಲಿ ಅಸಾಧಾರಣ ಸಾಧನೆ ಮಾಡಿರುವ ಅಜೀಂ ಪ್ರೇಮ್‌ಜಿ ಒಬ್ಬ ಗುಜರಾತಿ ಮುಸ್ಲಿಂ. ಈತ ಕರ್ನಾಟಕದಲ್ಲಿ ಹಣ ಸಂಪಾದನೆ ಮಾಡಿದ. ಬಹು ಭಾಗವನ್ನು ಕರ್ನಾಟಕಕ್ಕಾಗಿಯೇ ವ್ಯಯಿಸಿದ. ಆರೋಗ್ಯ, ಶಿಕ್ಷಣವೂ ಸೇರಿದಂತೆ ಹಲವು ಕ್ಷೇತ್ರಗಳಿಗೆ ಧಾರೆ ಎರೆದ. ಇದು ಎಲ್ಲರಿಗೂ ಪಾಠವಾಗಬೇಕು. ಎಲ್ಲಕ್ಕಿಂತ ಮುಖ್ಯವಾಗಿ ಅಜೀಂ ಪ್ರೇಮ್‌ಜಿಯ ಗುಜರಾತಿಗೆ. ಆ ರಾಜ್ಯದ 'ಅಂಧತೆ' ಯಾವುದನ್ನೂ ನೀಡುವುದಿಲ್ಲ ಎನ್ನುವುದು ಇಲ್ಲಿ ಮುಖ್ಯ.

ಆದರೆ ಕನ್ನಡಿಗರ ಈ ಹೃದಯ ವೈಶಾಲ್ಯಕ್ಕೆ ಕಪ್ಪು ಚುಕ್ಕೆಯಂಥ ಸಂಗತಿಗಳೂ ಎದುರಾಗಿವೆ. 1991ರಲ್ಲಿ ತಮಿಳು ವಿರೋಧಿ ಗಲಭೆ. ಕಾವೇರಿ ನೀರಿನ ಸಂಬಂಧ ಎರಡೂ ರಾಜ್ಯಗಳ ಮುಖ್ಯಮಂತ್ರಿಗಳು ನೀಡಿದ ಹೇಳಿಕೆಗಳ ಸಮರದಿಂದ ಹುಟ್ಟಿದ ಗಲಭೆ ಅದು. ಗಲಭೆ ಇತಿಹಾಸ ಸೇರಿದ್ದರೂ ಅದರ ಕಹಿನೆನಪು ಇನ್ನೂ ಮಾಸಿಲ್ಲ. ತಮಿಳಿನ ಬಹು ಮಂದಿ ಕರ್ನಾಟಕದಲ್ಲಿದ್ದರೂ ಒಬ್ಬ ತಮಿಳಿಗ ರಾಜ್ಯ ಸಚಿವ ಸಂಪುಟದಲ್ಲಿಲ್ಲ. ಆದರೆ ತೆಲುಗು, ಮರಾಠಿ ಮಲೆಯಾಳಂ ಮಾತನಾಡುವ ಮಂದಿ ಇದ್ದಾರೆ. ಕಾವೇರಿ ಸಮಸ್ಯೆಯ ಕುರುಹಾಗಿ ಅಲಸೂರಿನಲ್ಲಿ ತಿರುವಳ್ಳವರ್ ಮೂರ್ತಿ ಇನ್ನೂ ಮುಸುಕು ಹೊದ್ದು ಕುಳಿತಿದೆ. ಕರ್ನಾಟಕದ ಯಾವುದೇ ಮುಖ್ಯಮಂತ್ರಿ ಅಥವಾ ಬೆಂಗಳೂರಿನ ಯಾವುದೇ ಮೇಯರ್ ಈ ಮೂರ್ತಿಯ ಮುಸುಕು ಸರಿಸುವ ಎದೆಗಾರಿಕೆ ತೋರಿಸಿಲ್ಲ.

ಕನ್ನಡಿಗರ ಭಾಷಾ ಅಂಧಾಭಿಮಾನ ಇತ್ತೀಚಿನ ಮತ್ತೊಂದು ಬೆಳವಣಿಗೆಯಲ್ಲಿ ಪ್ರಕಟಗೊಂಡಿದೆ. ಕನ್ನಡೇತರ ಚಿತ್ರಗಳನ್ನು ಆಯಾ ರಾಜ್ಯದಲ್ಲಿ ಬಿಡುಗಡೆಯಾದ ಏಳು ವಾರಗಳ ನಂತರ ಬಿಡುಗಡೆ ಮಾಡಬೇಕೆಂಬ ಕನ್ನಡ ಚಿತ್ರ ಉದ್ಯಮದ ಪ್ರಮುಖರ ಒತ್ತಡಕ್ಕೆ ಸರ್ಕಾರ ಮಣಿದಿದೆ.ಇದನ್ನು ಪ್ರತಿಭಟಿಸಿ ಬೆಂಗಳೂರಿನ ಅರವತ್ತು ಚಿತ್ರಮಂದಿರ ಗಳು ಪ್ರದರ್ಶನವನ್ನು ಸ್ಥಗಿತಗೊಳಿಸಿದೆ. ಈ ನಿರ್ಧಾರ ಅಚಲವಾದರೆ, ಇದನ್ನು ನ್ಯಾಯಾಲಯ ದಲ್ಲಿ ಪ್ರಶ್ನಿಸುವುದು ಅನಿವಾರ್ಯ. ಕನ್ನಡೇತರ ಚಿತ್ರಗಳ ಮೇಲಿನ ಈ ನಿರ್ಬಂಧ ಅನೈತಿಕ ವ್ಯಾಪಾರ ನೀತಿ ಎಂದು ಹೇಳಬೇಕಾಗುತ್ತದೆ. ಕನ್ನಡೇತರ ಚಿತ್ರಗಳ ಮೇಲಿನ ಈ ನಿಷೇಧ ಬಹುಬೇಗ ರದ್ದಾಗುತ್ತದೆ ಎಂಬ ಆಶಾಭಾವನೆ ಇಟ್ಟುಕೊಳ್ಳ ಬಹುದು. ಮುಸುಕು ಹೊದ್ದು ಕುಳಿತ ತಿರುವಳ್ಳವರ್ ಪ್ರತಿಮೆಯಂತೆ, ಈ ನಿಷೇಧ ಕೂಡ ಕನ್ನಡಿಗರ ಹೃದಯ ವೈಶಾಲ್ಯಕ್ಕೆ ಕಪ್ಪು ಚುಕ್ಕೆಯಂತೆ ಕಾಣುತ್ತಿದೆ. ●

---

**ರಾಮಚಂದ್ರ ಗುಹಾ ಈ ಲೇಖನ ಬರೆದಾಗ ಇದ್ದ ಚಿತ್ರೋದ್ಯಮದ ವಿದ್ಯಮಾನ ಈಗ ಬದಲಾಗಿದೆ.**

---

# ಜೊಂಡು

ಗ್ರೀಸ್ ದೇಶದ ಈಸೋಪ ಒಂದು ಕತೆ ಹೇಳಿದ್ದಾನೆ :

ಒಂದು ನದಿತೀರದಲ್ಲಿ ಒಂದು ಮಹಾವೃಕ್ಷ ಇತ್ತು. ಅಲ್ಲೇ ಕೆಲವು ಜೊಂಡುಗಳೂ ಇದ್ದವು. ಒಂದು ಸಲ ದೊಡ್ಡ ಬಿರುಗಾಳಿ ಎದ್ದಿತು. ಮಹಾಪ್ರವಾಹ ಬಂತು. 'ಇವುಗಳಿಗೆಲ್ಲ ನಾನು ಬಗ್ಗುವುದಿಲ್ಲ' ಎಂದು ಮಹಾವೃಕ್ಷ ಸೆಟೆದು ನಿಂತಿತು. ಪ್ರವಾಹ ಅದರ ಬುಡವನ್ನು ಹಿಡಿದು ಅಲ್ಲಾಡಿಸಿ, ಬಿರುಗಾಳಿ ಅದರ ಕೊಂಬೆಗಳನ್ನು ಹಿಡಿದು ಅಲ್ಲಾಡಿಸಿ, ಮರ ಬುಡಕಿತ್ತು ಉರುಳಿ ಕೊಚ್ಚಿಕೊಂಡು ಹೋಯಿತು. ಜೊಂಡು ಮಾತ್ರ 'ಈ ಬಿರುಗಾಳಿಯ ಎದುರಿಗೆ, ಈ ಪ್ರವಾಹದ ಎದುರಿಗೆ, ನಾನು ಏನು ಮಾಡಿಯೇನು! ನಾನು ಅಲ್ಪ!' ಎಂದು ಅವುಗಳ ಎದುರು ಸೆಟೆದು ನಿಲ್ಲದೆ, ಅವು ಯಾವ ದಿಕ್ಕಿಗೆ ಬಾಗಿಸಿದರೆ ಆ ದಿಕ್ಕಿಗೆ ಬಾಗುತ್ತಿತ್ತು. ಬಿರುಗಾಳಿಯ ಬಿರುಸು ಇಳಿದ ಮೇಲೆ, ಪ್ರವಾಹದ ವೇಗ ಆರಿದ ಮೇಲೆ, ಹಿಂದೆ ಇದ್ದ ಹಾಗೆ ತಲೆಯೆತ್ತಿ ನಿಂತಿತು! ●

# 17 ವರ್ಷ ಇಂಗ್ಲಿಷ್‌ನಲ್ಲೇ ಬರೆದಿದ್ದೆನಲ್ಲ; ನೆನೆಸಿಕೊಂಡು ನಾಚಿಕೆಯಾಯಿತು...

❑ ಗೂಗಿ ವಾ ಥಿಯಾಂಗೋ



ತೃತೀಯ ಜಗತ್ತಿನ ರಾಷ್ಟ್ರಗಳ ಮೇಲೆ ಸಾಮ್ರಾಜ್ಯವಾದದ ಹಿಡಿತ ಎಷ್ಟೊಂದು ಬಲವಾಗಿದೆ ಎಂದು ತಿಳಿದವನು ಕೀನ್ಯಾದ ಲೇಖಕ ಗೂಗಿ ವಾ ಥಿಯಾಂಗೊ. ಇಂಗ್ಲಿಷೆಂದರೆ ಅಸಹ್ಯಿಸಿಕೊಳ್ಳುವ ಆತ, ಅಲೆಮಾರಿಯಾಗಿದ್ದುಕೊಂಡು ತನ್ನ 'ಗಿಕೂಯಿ' ಭಾಷೆಯಲ್ಲಿಯೇ ಬರೆಯುತ್ತ ಬಂದವನು. ಮಾತೃಭೂಮಿ, ಮಾತೃಭಾಷೆಗಳನ್ನು ಅಪರಿಮಿತವಾಗಿ ಪ್ರೀತಿಸುವ ಗೂಗಿ 22 ವರ್ಷಗಳ ನಂತರ ಕೀನ್ಯಾಕ್ಕೆ ಮೊನ್ನೆ ಆಗಸ್ಟ್ 11 ರಂದು ಭೇಟಿಕೊಟ್ಟಾಗ ಕೆಲವರು ಆತನ ಮೇಲೆ ದಾಳಿ ಮಾಡಿದರು. ಆತನ ಹೆಂಡತಿಯ ಮೇಲೆ ಅತ್ಯಾಚಾರ ನಡೆಯಿತು. ಈ ಘಟನೆಗೆ ಮುಂಚೆ ತೆಲುಗು ಪತ್ರಕರ್ತ, ಪ್ರತಿಭಾಶಾಲಿ ಕವಿ ಮತ್ತು ಗೂಗಿಯ ಮಗ 'ಮುಕೋಮಾ'ನ ಮಿತ್ರನೇ ಆಗಿರುವ 'ಅಫ್ಸರ್' ಅಮೆರಿಕಾದಲ್ಲಿ ಗೂಗಿಯೊಂದಿಗೆ ನಡೆಸಿದ ಸಂದರ್ಶನವಿದು. ಈ ಸಂದರ್ಶನ ಇತ್ತೀಚೆಗೆ ಆಂಧ್ರಜ್ಯೋತಿ ಪತ್ರಿಕೆಯಲ್ಲಿ ಪ್ರಕಟವಾಗಿತ್ತು. ಮಾತೃಭಾಷೆಯನ್ನು ಕುರಿತ, ಅದರ ಕಣ್ಣಿಂದ ನೋಡುವಾಗಿನ ದಿವ್ಯಾನುಭವವನ್ನು ಕುರಿತ ಗೂಗಿಯ ಚಿಂತನೆ ಹೊಸದಾರಿ ತೋರಿಸಬಲ್ಲಂಥದ್ದು.

**ಮೊ**ದಲನೇ ಸಲ ಕಾಗದದ ಮೇಲೆ ನಿನ್ನ ಅಕ್ಷರಗಳನ್ನು ಬರೆದಾಗ ನಿನಗೆ ಹೇಗನ್ನಿಸಿತ್ತೆಂದು ನೆನಪಿದೆಯಾ? ಇವನ್ನು ನಾನೇ ಬರೆದದ್ದಾ? ಅಂತ ಹೊಳೆಯುವ ಕಂಗಳಿಂದ ನೋಡುತ್ತಿದ್ದರೆ ಎಷ್ಟು ಹೊತ್ತಾದರೂ ಬೇಸರವೇ ಹುಟ್ಟುವುದಿಲ್ಲ. ಎಷ್ಟೊಂದು ಹೆಮ್ಮೆ ನನಗೆ. ಅದೇ ತಾನೆ ಹುಟ್ಟಿದ ಮಗುವನ್ನು ನೇವರಿಸುತ್ತ ಎಷ್ಟು ಸಲ ನೋಡಿದರೂ ತೃಪ್ತಿಯಾಗದ ತಾಯಿಯಂತೆ. ಆ ಕ್ಷಣದ ಅನುಭವವನ್ನು ಅಕ್ಷರಗಳಲ್ಲಿ ಹಿಡಿದಿಡಬಲ್ಲವನೇ ನಿಜವಾದ ಕವಿ. ಸಾಹಿತ್ಯದ ಶಕ್ತಿಯೇನೆಂದು ಗೊತ್ತಾಗುವುದೇ ಆವಾಗ. ನಮ್ಮ ಹಳೆಕವಿಗಳು ಇದನ್ನೇ ದೈವಿಕಶಕ್ತಿ ಎಂದು ಕೊಂಡರೇನೋ. ನಾನು ಇಂಗ್ಲಿಷಿನಲ್ಲಿ ಬರೆದಷ್ಟು ಕಾಲ ಈ ಅನುಭವದಿಂದ ವಂಚಿತನಾದೆ. ಇಂಗ್ಲಿಷಿನಲ್ಲಿ ಬರೆಯುವುದನ್ನು ಬಿಟ್ಟ ಮೇಲೆ ಜೈಲಿನಿಂದ ಹೊರಬಿದ್ದಷ್ಟು ಖುಷಿ. ನನ್ನ 'ಗಿಕೂಯಿ' ಭಾಷೆ ಎಷ್ಟು ಸುಂದರವಾದುದು ಎಂದು ಹೇಳಲು ಪದಗಳೇ ಸಾಲದಾದವು. ಅವುಗಳಲ್ಲಿ ಕೆಲವು ಕಾದಂಬರಿಗಳಾದವು. ಕೆಲವು ನಾಟಕಗಳಾದವು. ಇಂಗ್ಲಿಷಿನಲ್ಲಿ ಬರೆಯುತ್ತಿದ್ದಷ್ಟು ಕಾಲ ನನಗೆ ಅಸ್ತಿತ್ವದ ಕ್ಷೋಭೆ ಕಾಡುತ್ತಿತ್ತು. 'ಗಿಕೂಯಿ' ಯಲ್ಲಿ ಬರೆಯಲು ಪ್ರಾರಂಭಿಸಿದಾಗಿನಿಂದ ನನ್ನ ಭಾಷೆ ನನಗೆ ದೊರೆತಂತೆ ಭಾಸವಾಗುತ್ತಿದೆ.

ಅದು ನಾನು ಜೈಲಲ್ಲಿದ್ದ ಕಾಲ. ನನ್ನವರೊಂದಿಗೆ ಮಾತಾಡಬೇಕು. ಅವರೊಂದಿಗೆ ಬೆರೆಯಬೇಕು ಎಂಬ

ಕಲ್ಪನೆ ನನ್ನಲ್ಲಿ. ಆದರೆ ಜೈಲುಗೋಡೆಗಳಲ್ಲಿ ಬಂಧಿ ನಾನು. ನಿಜ ಹೇಳಬೇಕೆಂದರೆ ಈ ಜೈಲುವಾಸ ಇಲ್ಲದಿದ್ದರೆ ನಾನೆಂದೂ 'ಗಿಕೂಯಿ'ಯಲ್ಲಿ ಬರೆಯುತ್ತಲೇ ಇರಲಿಲ್ಲ. ಜೈಲಲ್ಲಿದ್ದಾಗಲೇ ನಾನು ನನ್ನವರಿಗೆ ತುಂಬಾ ಹತ್ತಿರವಾದೆ. ಆ ಕಾರಣಕ್ಕೆ, ನನ್ನನ್ನು ಬಂಧಿಸಿದವರಿಗೆ ಕೋಟಿಕೋಟಿ ನಮನಗಳು. ಏಕೆಂದರೆ ಈವರೆಗೆ ಕಣ್ಣಿಗಾವರಿಸಿಕೊಂಡಿದ್ದ ಇಂಗ್ಲಿಷ್ ಪರದೆಯನ್ನು ಕಿತ್ತುಬಿಸಾಕಿದ ಮೇಲೆ ನನಗೆ ಹೊಸದೃಷ್ಟಿ ಬಂದಂತಾಯ್ತು. ನಿಜ ಹೇಳಬೇಕೆಂದರೆ ಅದು ಮಾನಸಿಕವಾಗಿ ದೊಡ್ಡ ವಿಮುಕ್ತಿ. ನಾಲ್ಕು ದಶಕಗಳು ಈ ದಿಕ್ಕಿಲ್ಲದ ಇಂಗ್ಲಿಷಿನ ಗುಲಾಮನಾಗಿದ್ದೆನಲ್ಲ, ನನ್ನಸ್ವಂತ ಭಾಷೆಯಲ್ಲಿ ಒಂದೇ ಒಂದು ವಾಕ್ಯ ತಪ್ಪಿಲ್ಲದೆ ಬರೆಯಬಲ್ಲೆನಾ, ಓದಬಲ್ಲೆನಾ ಅಂತ ನನ್ನನ್ನೇ ನಾನು ಪ್ರಶ್ನಿಸಿಕೊಂಡೆ. ಇಷ್ಟು ದೀರ್ಘ ಅವಧಿಯಲ್ಲಿ 'ಗಿಕೂಯಿ' ಭಾಷೆಯಲ್ಲಿ ಒಂದೇ ಒಂದು ಪೇಜು ಓದಿದ್ದೇನಾ ಅಂತ ಹಿಂತಿರುಗಿ ನೋಡಿಕೊಂಡೆ. ಕೊನೆಗೆ ಟಾಯ್ಲೆಟ್ ಪೇಪರ್ ಮಾತ್ರವೇ ಸಿಗುವಂಥ ಬಂಧನದ ಬದುಕನ್ನು ಬದುಕುತ್ತಿದ್ದೆ. ಮಾನಸಿಕವಾಗಿ ನಾನು ಸಾಧಿಸಿದ ವಿಮುಕ್ತಿಗೆ ಜೈಲಿನ ಈ ಬಂಧನವೇನೂ ಅಡ್ಡಿಯಾಗಲಿಲ್ಲ. ನನ್ನ ಭಾಷೆಯಲ್ಲಿ ನನ್ನವರೊಂದಿಗೆ ಈಗ ಮಾತನಾಡುತ್ತಿದ್ದೇನೆ, ಕಾಗದದ ಮೇಲೆ.

### ಪೊಲೀಸರೇ ಹಾಸ್ಯಕವಿಗಳು

ನನ್ನ ಕಥೆಯಲ್ಲಿ 'ನಾನು' ಯಾರು ಅಂತ ಶೋಧಿಸಲಿಕ್ಕೆ ಪ್ರಾರಂಭಿಸಿದೆ. ಕೆಲಸಲ ನನಗೆ 'ನಾನು' ದೊರತೆ, ಕೆಲಸಲ ದೊರಕಲಿಲ್ಲ. ಆದರೆ ಸರ್ಕಾರ ಮಾತ್ರ ಪ್ರತಿಸಲವೂ ನನ್ನ ಕಥೆಯಲ್ಲಿನ 'ನನ್ನನ್ನು' ಹಿಡಿಯಲು ಚಾಕಚಕ್ಯತೆಯಿಂದ ಬಲೆ ಬೀಸುತ್ತ ಬಂತು. ನನ್ನ ಕಥೆಯಲ್ಲಿನ 'ನಾನು' ಎಂಬುವವನು ನಿಜವಾಗಿ ಇದ್ದಾನೆಂದೇ ಸರ್ಕಾರದ ಬಲವಾದ ನಂಬಿಕೆ. ಆ ಪಾತ್ರದ ಮೂಲಕ ನಾನು ಕೊಟ್ಟ ಸ್ಥಳದ ವಿವರಗಳನ್ನು ಪೊಲೀಸ್ ವ್ಯವಸ್ಥೆ ಬಂದೂಕು ಹಿಡಿದುಕೊಂಡು ಹೋಗಿ ಹುಡುಕಿ ನೋಡಿತು. 'ಮಾಟಿಗಾರಿ' ಕಾದಂಬರಿಯಲ್ಲಿನ 'ಮಾಟಿಗಾರಿ'ಯ ಕಥೆ ಹಾಗೇ ಆಯ್ತಲ್ಲ ಮತ್ತೆ! ಆ ಮಾಟಿಗಾರಿ ನಿಜವಾದ ಮನುಷ್ಯನೇ ಅಂತ ಪೊಲೀಸರಿಗೆ ಅನುಮಾನ. ಅನುಮಾನವೇನು ಬಂತು ಬಲವಾದ ನಂಬಿಕೆ ಅಷ್ಟೇ, ಆ ಕಾದಂಬರಿ ಪೊಲೀಸರ ಗೈಡ್ ಆಯ್ತು. ಆ ಕಾದಂಬರಿಯ ಕೇಂದ್ರ ಪಾತ್ರ 'ಮಾಟಿಗಾರಿ'ಯ ಮೇಲೆ ಅರೆಸ್ಟ್ ವಾರಂಟೂ ಹೊರಬಿತ್ತು. ಆ ಕಾದಂಬರಿಯಲ್ಲಿ ಮಾಟಿಗಾರಿ ತಿರುಗಿದ ಊರುಗಳೆಲ್ಲವನ್ನೂ ಪೊಲೀಸರು ಜಾಲಾಡಿದರು. ಎಲ್ಲಿಯೂ ಮಾಟಿಗಾರಿಯ ಸುಳಿವು ಸಿಕ್ಕಲಿಲ್ಲ. ಕಡೆಗೆ ಆ ಕಾದಂಬರಿಯ ಪ್ರತಿಗಳು ಮಾರಾಟಕ್ಕಿದ್ದ ಪುಸ್ತಕದ ಮಳಿಗೆ ಮೇಲೆ ದಾಳಿ ಮಾಡಿದರು. ಅಲ್ಲಿಯೂ ಮಾಟಿಗಾರಿ ಸಿಗಲಿಲ್ಲ. ಮತ್ತೇನೂ ಮಾಡಲಾಗದೆ ಪುಸ್ತಕವನ್ನು ಬ್ಯಾನ್ ಮಾಡಿದರು. ನಾನು ಸೃಷ್ಟಿಸಿದ ಮಾಟಿಗಾರಿ ನಿಜವಾಗಿಯೂ ಪ್ರಜೆಗಳಲ್ಲಿ ಬದುಕುತ್ತಿದ್ದಾನೆಂದು ನನಗನ್ನಿಸಿತು. ಆದರೆ ಪೊಲೀಸರ ಪೆದ್ದುತನವನ್ನು ಕಂಡು ಜನ ಬಿದ್ದು ಬಿದ್ದು ನಕ್ಕರು. ಪೊಲೀಸರಿಗಿಂತ ಕಾಮಿಡಿಯನ್ಸ್ ಎಲ್ಲೂ ಇಲ್ಲ! ಕೀನ್ಯಾ, ಭಾರತ, ಪಾಕಿಸ್ತಾನ.... ಹೀಗೆ ಎಲ್ಲ ಕಡೆ ಅಧಿಕಾರಿಗಳು, ಪೊಲೀಸರು ಒಂದೇ ರೀತಿ ಅನ್ನಿಸ್ತಾರೆ ನನಗೆ. ನಿಜವಾಗಿಯೆಂದರೆ ಈ ದೇಶಗಳಲ್ಲಿ ಹೊರಗಡೆ ಇರುವ ಜನರಿಗಿಂತ ಜೈಲಲ್ಲಿರುವ ಜನರ ಸಂಖ್ಯೆಯೇ ಹೆಚ್ಚೆನಿಸುತ್ತದೆ, ನನಗೆ. ಆ ಜೈಲುಗಳಲ್ಲಿರುವ ಜನಸಂಖ್ಯೆಯೆಲ್ಲ ಸೇರಿಸಿದರೆ ಅದೂ ಒಂದು ದೇಶವೇ ಆಗುತ್ತದೆ. ಮೂಲ ಜನಸಂಖ್ಯೆ ಗಿಂತ ಜೈಲಿನ ಜನಸಂಖ್ಯೆಯೇ ಹೆಚ್ಚಾಗುತ್ತಿರುವಾಗ ಜೈಲಿನ ಹೊರಗಿನ ಪ್ರದೇಶಕ್ಕೆ 'ದೇಶ' ಅಂತ ಕರೆಯುತ್ತಿರುವುದರಲ್ಲೂ ಅರ್ಥವಿಲ್ಲವೆನಿಸುತ್ತದೆ.

### ಮಾರ್ಕೆಟ್ ಸದ್ಯದ ಹೊಸ ದೇವರು

ಮಾರ್ಕ್ಸಿಸಂ ಮೇಲಿನ ಪ್ರೀತಿ ದಿನದಿನಕ್ಕೆ ಹೆಚ್ಚಾಗುತ್ತಿದೆ. ನೀನು ಸಾಹಿತಿಯೊ, ಮಾರ್ಕ್ಸ್‌ವಾದಿಯೊ ಅಂತ ಕೇಳಿದರೆ ನಾನು ಸಾಹಿತಿಯೇ ಅಂತ ಹೇಳುತ್ತೇನಾದರೂ ನನ್ನೊಳಗಿನ ಮಾರ್ಕ್ಸಿಸ್ಟನನ್ನು ಹೇಗೆ ಅಲ್ಲಗಳೆಯಲಿಕ್ಕಾಗುತ್ತದೆ? ಪ್ರಪಂಚದಲ್ಲೀಗ ಕ್ಯಾಪಿಟಲಿಸ್ಟ್ ಫಂಡಮೆಂಟಲಿಸಂ ಹೆಚ್ಚಾಗುತ್ತಿದೆ. ಮಾರುಕಟ್ಟೆ ಮಾತ್ರವೇ ದೇವರು ಎಂಬ ಭಾವನೆ ಬಲಗೊಳ್ಳುತ್ತಿದೆ. ಎಂಥವರೂ ಅದರ ಮುಂದೆ ತಲೆಬಾಗುವಂತೆ ಮಾರ್ಕೆಟ್ ರಾಕ್ಷಸ

ರೂಪುಗೊಂಡಿದೆ. 'ನೀನು ಖಾಸಗೀಕರಣಗೊಳ್ಳದಿದ್ದರೆ ನಿನಗೆ ಭಯಂಕರವಾದ ಶಿಕ್ಷೆ ತಪ್ಪಿದ್ದಲ್ಲ' ಎಂದು ಹೆದರಿಸುತ್ತಿದೆ ಈ ವ್ಯವಸ್ಥೆ. ಇಲ್ಲಿ ಮನುಷ್ಯತ್ವಕ್ಕೆ ಸ್ಥಾನವೇ ಇಲ್ಲ. ಸುತ್ತಲೂ ನಿರಾಶೆಯ ಕತ್ತಲು ಕವಿದಿರುವಾಗ ನಾನು ಮಾರ್ಕ್ಸಿಜಂ ದೀಪವನ್ನು ಹಚ್ಚಿಟ್ಟುಕೊಂಡು ಅದರ ಬೆಳಕಲ್ಲಿ ಸುತ್ತಲ ಪ್ರಪಂಚವನ್ನು ನೋಡುತ್ತೇನೆ. ನನ್ನೊಳಗೇ ಆ ದೀಪವನ್ನಿಟ್ಟುಕೊಂಡು ನನ್ನೊಳಗಿನ ಕತ್ತಲನ್ನು ತೊಳೆದುಕೊಳ್ಳುತ್ತೇನೆ. ನನ್ನನ್ನು ಮನುಷ್ಯನಾಗಿ ಪರಿಶುದ್ಧನ್ನಾಗಿಸುವ ಶಕ್ತಿಯನ್ನು ನನ್ನ ಬರಹಗಳಿಂದ ತೆಗೆದುಕೊಳ್ಳುತ್ತೇನೆ. ನಾನ್ಯಾರು ಎಂಬ ಪ್ರಶ್ನೆ ಕಾಡಿದಾಗೆಲ್ಲ ನನ್ನನ್ನು ದಡಕ್ಕೆ ಹತ್ತಿಸುವ ಶಕ್ತಿ ಅಕ್ಷರಗಳಿಗೆ ಮಾತ್ರವೇ ಇದೆಯೆಂದು ನಂಬುತ್ತೇನೆ. ಕನಸುಗಳನ್ನು ಕತ್ತುಹಿಚುಕಿ ಸಾಯಿಸಬೇಡ ಎಂಬ ಸಲಹೆ ನನಗೆ ಈ ಅಕ್ಷರಗಳಿಂದಲೇ ದೊರೆಯುತ್ತದೆ. ಒಂದು ಸಣ್ಣ ಪದ್ಯ ಹೇಳಲಾ?

***ಕನಸು ಕಾಣು ಒಂದು ಹೂವಿನಂತೆ***
***ಅದರಲ್ಲಿ ನಾಳೆಯ ಬೀಜಗಳಿವೆ***
***ಕನಸು ಕಾಣು ಒಂದು ಬೀಜದಂತೆ***
***ಅದರಲ್ಲಿ ನಾಳೆಯ ಮರ ಅಡಗಿದೆ***

## ನಾವಿನ್ನೂ ಗುಲಾಮರೇ

ಬಿಳಿಯರು ಹೊರಟುಹೋಗಿದ್ದಾರೆಂದುಕೊಳ್ಳುತ್ತಿದ್ದೇವೆ. ಅವರು ಭೌಗೋಳಿಕವಾಗಿ ಹೊರಟು ಹೋಗಿದ್ದಾರಷ್ಟೆ. ಬೌದ್ಧಿಕವಾಗಿಯಂತೂ ಬಲವಾಗಿ ಬೇರೂರಿದ್ದಾರೆ. ಅದರ ಫಸಲು ಸಮೃದ್ಧವಾಗಿರುವುದು ಕಂಡು ನಾವು ಸಂಭ್ರಮಪಡುತ್ತಿದ್ದೇವೆ. ಈ ಚರ್ಚುಗಳು, ಕಾನ್ವೆಂಟ್ ಶಾಲೆಗಳು ಇದಕ್ಕೆ ಸಾಕ್ಷಿ. ನಮ್ಮ ಮಕ್ಕಳಲ್ಲಿ ನಮ್ಮ ಭಾಷೆ ನಮ್ಮ ಸಂಸ್ಕೃತಿಯು ಬೆಳೆಯದಂತೆ ಕಣ್ಮುಂದೆಯೇ ಕತ್ತರಿಸಿ ಹಾಕುತ್ತಿರುವುದನ್ನು ನೋಡುತ್ತಿದ್ದರೂ, ಈ ದಾಸ್ಯ ಮಹಾಭಾಗ್ಯವೆಂದುಕೊಳ್ಳುತ್ತಿದ್ದೇವೆ ನಾವು. ಯುದ್ಧಗಳು ಕೇವಲ ಭೌಗೋಳಿಕ ರಣಭೂಮಿಯಲ್ಲಷ್ಟೇ ನಡೆಯುತ್ತವೆಂಬುದು ಬರೀ ಭ್ರಮೆ. ಯುದ್ಧಗಳೀಗ ಭಾಷೆಯ ರೂಪದಲ್ಲಿ ನಡೆಯುತ್ತಿವೆ. ಬಂದೂಕುಗಳು ಫಿರಂಗಿಗಳು, ಶರೀರವನ್ನು ಹೆದರಿಸಿದರೆ, ಈ ಸಾಮ್ರಾಜ್ಯಶಾಹಿ ಭಾಷೆ ಆತ್ಮವನ್ನೇ ಹೆದರಿಸುತ್ತಿದೆ. ಶಾರೀರಿಕ ದಾಸ್ಯಕ್ಕಿಂತ ನಿಕೃಷ್ಟವಾದ ಆತ್ಮದಾಸ್ಯಕ್ಕೆ ನಾವು ಒಗ್ಗಿಕೊಂಡು ಬಿಟ್ಟಿದ್ದೇವೆ. ಆಯುಧಗಳಿಂದ ಮಾಡಲಾಗದ ಯುದ್ಧವನ್ನು ಸಾಮ್ರಾಜ್ಯಶಾಹಿ ರಾಷ್ಟ್ರಗಳು ಭಾಷೆಯ ಅಸ್ತ್ರದಿಂದ ಮಾಡುತ್ತಿವೆ. ಇಂಗ್ಲಿಷ್ ಭಾಷೆ ಮೊತ್ತಮೊದಲು ಮಾಡುವ ಕೆಲಸ ನಮ್ಮೊಳಗಿನ ಸಮಷ್ಟಿತತ್ವವನ್ನು ನಾಶಮಾಡುವುದು. ನಮಗೂ ನಮ್ಮ ಜೀವನಶೈಲಿಗೂ ಇರುವ ಸಹಜ ಸಂಬಂಧವನ್ನು ಮುರಿಯುವುದು. ಎಲ್ಲಕ್ಕಿಂತ ಹೆಚ್ಚಾಗಿ ಪರಿಸರದಿಂದ ವ್ಯಕ್ತಿಯನ್ನು ದೂರ ಸರಿಸುವುದು. ಇಷ್ಟಾದ ಮೇಲೆ ಸಾಮ್ರಾಜ್ಯವಾದ ಮತ್ತೇನೂ ಮಾಡಬೇಕಿಲ್ಲ, ಉಳಿದ ಕೆಲಸವನ್ನು ಅವರ ಶಾಲೆಗಳು ಮಾಡುತ್ತವೆ. 'ಮಾತೃಭಾಷೆಯಲ್ಲಿ ಮಾತಾಡುವವ ಮೂದೇವಿ, ಸ್ವಂತ ಭಾಷೆಯಷ್ಟೇ ಗೊತ್ತಿರುವವ ಕೆಲಸಕ್ಕೆ ಬಾರದವ' ಎಂಬ ಭಾವನೆಯನ್ನು ಅವು ಬಿತ್ತುತ್ತವೆ. 'ಇಂಗ್ಲಿಷನ್ನು ಮಾತ್ರವೇ ಕಲಿಯಿರಿ, ಮಾರುಕಟ್ಟೆಯನ್ನು ಸಂಪಾದಿಸಿಕೊಳ್ಳಿ' ಎನ್ನುತ್ತದೆ ಸಾಮ್ರಾಜ್ಯವಾದ. ಭಾಷೆ ಸಂಸ್ಕೃತಿಗೆ ಜೀವ, ಅದು ಚರಿತ್ರೆಯ ಸಮಷ್ಟಿಸ್ಮೃತಿ ಅನ್ನುವ ಭಾವನೆಯನ್ನು ಬೇರುಸಮೇತ ಕತ್ತರಿಸಿಹಾಕುವುದು ಅದರ ಸ್ವಭಾವ. ಈಗಲಂತೂ ಇದೆಲ್ಲ ನಮ್ಮ ನರನರಗಳಲ್ಲಿ ಬೆರೆತು ಹೋಗಿದೆ. ಕಡೆಗೆ ನಮ್ಮ ಕನಸುಗಳು, ಕನವರಿಕೆಗಳೂ ಕೂಡ ಪರಭಾಷೆಯಲ್ಲಿ ಬಂದರೆ ಅದೇ ನಮ್ಮ ಜೀವನದ ನಿಜವಾದ ಗೆಲುವು ಎಂಬ ಭ್ರಮೆಯಲ್ಲಿ ನಾವಿದ್ದೇವೆ. ಈ ಕಹಿಸತ್ಯ ಅರ್ಥವಾದ ಮೇಲೆ, ನಾನೇಕೆ ಇಷ್ಟು ನೀಚವಾದ ಭಾಷೆಯಲ್ಲಿ ಬರೆಯಬೇಕೆಂಬ ಪ್ರಶ್ನೆ ನನ್ನಲ್ಲಿ ಹುಟ್ಟಿತು. ಹದಿನೇಳು ವರ್ಷ ಇಂಗ್ಲಿಷಲ್ಲಿ ಮಾತ್ರವೇ ಬರೆದದ್ದಕ್ಕಾಗಿ ನಾಚಿಕೆಯಿಂದ ತಲೆತಗ್ಗಿಸಿಕೊಂಡೆ.

1977 ನನ್ನ ಜೀವನದಲ್ಲಿ ಅತಿ ದೊಡ್ಡ ತಿರುವು ತಂದ ಕಾಲ. 'ನನ್ನ ಗಿಕೂಯಿ' ಭಾಷೆಯಲ್ಲಿ ನಾನಾಗ ಬರೆಯಲು ಪ್ರಾರಂಭಿಸಿದೆ. ಇಡೀ ಪ್ರಪಂಚ ಅದರಲ್ಲೂ ಮುಖ್ಯವಾಗಿ ಬಳಿಯರ ಪ್ರಪಂಚ ನನ್ನನ್ನು ಹುಚ್ಚನಂತೆ ನೋಡಿತು. ಆ ಗಿಕೂಯಿ ಭಾಷೆಯನ್ನು ಎಷ್ಟು ಜನ ಮಾತಾಡ್ತಾರೆ? ಅದರಲ್ಲಿ ಮಾತ್ರವೇ ಬರೆಯಬೇಕೆಂಬುದು ಅದೆಂಥಾ ನಿರ್ಧಾರ? ಇದು ಬಿಳಿಪಂಡಿತರ ಪ್ರಶ್ನೆ. ಸಾಮ್ರಾಜ್ಯವಾದದ ದೃಷ್ಟಿಯಲ್ಲಿ ನಾನು ಆ ಭಾಷೆಯಲ್ಲಿ

ಬರೆಯುವುದು ಒಂದು ವಿಚಿತ್ರ, ಅಸಾಮಾನ್ಯ ಸಂಗತಿ. ಸಾಮಾನ್ಯವಾದ್ದನ್ನು ಅಸಾಮಾನ್ಯಗೊಳಿಸುವುದೇ ಸಾಮ್ರಾಜ್ಯವಾದದ ಮಾಯಾಶಕ್ತಿ. ಅದು ತಲೆಕೆಳಗಾದ ಲೋಕವೇ ನಿಜವಾದ ಲೋಕವೆಂದು ನಮ್ಮಿಂದ ನಂಬಿಸುತ್ತದೆ. ಈ ಲೋಕವೆಲ್ಲ ಯುರೋಪಿನ ಭಿಕ್ಷೆ ಎನಿಸುವಂತೆ ಮಾಡುತ್ತದೆ. ಆಫ್ರಿಕಾ ಇಲ್ಲವೆಂದರೆ ಯುರೋಪಿಗೂ ಅಸ್ತಿತ್ವ ಇಲ್ಲ ಎಂಬುದು ವಾಸ್ತವ. ನಮ್ಮ ಹಿರಿಯರ ಕೈಯ ನೀರು ಕುಡಿದೇ ಬಿಳಿಯರು ಬದುಕುತ್ತಿದ್ದಾರೆ. ಆದಾಗ್ಯೂ ಈ ಪ್ರಗತಿ, ಈ ಆಧುನಿಕತೆ ಎಲ್ಲ ಬಿಳಿಯರ ದಯೆ ಎಂದು ನಂಬಿಸುತ್ತಾರೆ. ಕಡೆಗೆ ನಮ್ಮ ಚಿಂತಕರು ಕೂಡ ಯುರೋಪ್ ಮಾಯೆಗೆ ಶರಣಾಗಿಬಿಟ್ಟಿದ್ದಾರೆ. ಈ ಮಾಯೆಯ ಬಲೆಯಿಂದ ಹೊರಬರುವಂತಾಗಲು ಈ ಚಿಂತಕರುಗಳೆಲ್ಲ ಸ್ಥಳೀಯ ಪ್ರಜೆಗಳೊಂದಿಗೆ ಬೆರೆಯಬೇಕು, ಏಕಗೊಳ್ಳಬೇಕು. ಮಾರುವೇಷದಲ್ಲಿ ಬರುತ್ತಿರುವ ಸಾಮ್ರಾಜ್ಯಶಾಹಿಯಿಂದ ನಮ್ಮ ನೆಲವನ್ನು ಕಾಪಾಡಿಕೊಳ್ಳಬೇಕು. ಈ ಹೋರಾಟಕ್ಕಾಗಿ ಪ್ರಾಣಸಹಿತ ಮುಡಿಪಾಗಿಟ್ಟಿರುವ ಚಳುವಳಿಗಳೊಂದಿಗೆ ಕೈ ಜೋಡಿಸಬೇಕು. ಈ ಕೆಲಸ ಮಾಡುವ ಚಿಂತಕನಾಗಲಿ, ಸಾಹಿತಿಯಾಗಲಿ ಊಳಿಗಮಾನ್ಯ ಯಜಮಾನನ ದೃಷ್ಟಿಯಲ್ಲಿ ಅಪರಾಧಿ, ಸಮಾಜದ್ರೋಹಿ ಎನಿಸಿಕೊಳ್ಳುತ್ತಾನೆ. ಆತನಿಗೆ ಕೇವಲ ಅವಮಾನಗಳಲ್ಲದೆ ಸನ್ಮಾನವು ದೊರೆಯದು; ತಿರಸ್ಕಾರಗಳಲ್ಲದೆ ಪುರಸ್ಕಾರಗಳು ದೊರೆಯವು. ಆದರೂ, ಚಳವಳಿಗಳೊಂದಿಗೆ ಕೈ ಜೋಡಿಸುವುದರಿಂದ ಚಿಂತಕರು, ಸಾಹಿತಿಗಳು ಹಿಂದೆ ಸರಿಯಬಾರದು.

**ಕನ್ನಡಕ್ಕೆ : ಚಿದಾನಂದ ಸಾಲಿ**

---

ಚುಟುಕ

## ನಾನು ಮತ್ತು ನನ್ನ...

ಕುಟುಂಬ ಯೋಜನಾಧಿಕಾರಿ ಹಳ್ಳಿಗರಿಯುತ್ತಾ ಕೇಳಿದರು:
''ನಿಮ್ಮ ಕುಟುಂಬದ ಮೆಂಬರ್ಸ್ ಎಷ್ಟು ಹೇಳಿ''
ಹಳ್ಳಿಗರಿಯುತ್ತಾ ಕಾಶಿನಾಥ್ ಹೇಳಿದ : 'ನಾಕ್ ಜನ ಸಾ...'
'ವೆರಿಗುಡ್... ನೀವು, ನಿಮ್ಮ ಹೆಂಡತಿ, ಇಬ್ಬರು ಮಕ್ಕಳು ತಾನೆ..'
'ಅಲ್ಲಸಾ... ನಾನು, ನನ್ನ ಮೂರು ಜನ ಹೆಂಡ್ರು, ಸಾ...'

## ಪ್ರತಿ ವರ್ಷ

''ಪುಟ್ಟೀ ನಿನ್ನ ಬರ್ತ್‌ಡೇ ಯಾವತ್ತು ಕಣೇ''
''ಜೂನ್ 6 ಅಂಕಲ್''
''ಹೌದಾ.. ಯಾವ ವರ್ಷ ಮರೀ...''
''ಪ್ರತಿ ವರ್ಷ ಅಂಕಲ್''

## ಪಕ್ಕದ್ಮನೆಗೆ ಹೋಗಿದ್ದಕ್ಕೆ

''ನಿಮ್ಮ ಹೆಂಡತಿ ಸಿಟ್ಟು ಬಂದ್ರೆ, ಲಟ್ಟಣಿಗೆ ತಗೋತಾರಲ್ಲ..
ಈ ಸಲ ನಿಮ್ಮ ಕೆನ್ನೆ ಬಾತಂಗಿದೆ'' ಡೌಟನ್ನು ಕೇಳಿಯೇಬಿಟ್ಟರು ರಾಯರು.
''ಇಲ್ಲ ರಾಯರೇ, ರಾತ್ರಿ ಗುಂಡು ಜಾಸ್ತಿಯಾಗಿ ಪಕ್ಕದ್ಮನೆಗೆ ಹೋಗ್ಬಿಟ್ಟಿದ್ದೆ...'' ಡೌಟ್ ಕ್ಲಿಯರ್ ಮಾಡಿದರು, ಪ್ರಶ್ನೆ ಕೇಳಿಸಿಕೊಂಡಾತ.

# ಅಗೆದಾಗ ಸಿಕ್ಕಿದ್ದು ಚಿನ್ನದ ಅದಿರು

❑ ಎ. ಎನ್. ಪ್ರಸನ್ನ

**ಹೊ**ಟ್ಟೆಯಲ್ಲಿ ಸುಲಭವಾಗಿ ಆರದ, ಅಲ್ಪದರಲ್ಲೆ ಸಮಾಧಾನಗೊಳ್ಳದ ಉರಿ - ವಸ್ತು, ವಿಷಯ, ಶಾಸ್ತ್ರ ಇತ್ಯಾದಿ ಅಗಣಿತಗಳಲ್ಲಿ ಯಾವುದಾದರೊಂದರದ್ದು - ಹುಟ್ಟಿಕೊಂಡರೆ ಅದರಲ್ಲಿ ಪ್ರಾಪ್ತಿ ಇರುವಷ್ಟನ್ನಾದರೂ ತಡೆಯಲಿಕ್ಕೆ ಎಷ್ಟೆಲ್ಲ ಪಾಡು ಪಡುವುದು ಗೊತ್ತಿರುವ ಸಂಗತಿ ತಾನೆ. ಹಾಗಿದ್ದೂ ದೃಶ್ಯಮಾಧ್ಯಮದಲ್ಲಿ ಕೊರೆಯುವ ಆಸಕ್ತಿ, ಅಭಿರುಚಿಯುಳ್ಳವನಿಗೆ ಸ್ವೀಡನ್ನಿನ, ಎಲ್ಲ ಕಾಲಕ್ಕೆ ಸಲ್ಲುವಂಥ ಚಿತ್ರಗಳನ್ನು ನಿರ್ಮಿಸಿರುವ, ಇಂಗ್‌ಮರ್ ಬರ್ಗ್‌ಮನ್‌ನ ಚಿತ್ರಗಳನ್ನು ಸುಮ್ಮನೆ ಅನುಭವಿಸುವ ಅವಕಾಶ ದೊರಕಲಿಲ್ಲವೆಂದರೆ ಅದಕ್ಕಿಂತ ದೌರ್ಭಾಗ್ಯ ಇನ್ನೊಂದಿಲ್ಲ. ಅವನು ಒಂದಾದ ಮೇಲೊಂದು ಚಿತ್ರಗಳನ್ನು ತೆಗೆದ. ಚಿತ್ರಗಳನ್ನೇ? ಅಲ್ಲ. ಅವನು ಮನುಷ್ಯನಿಗೆ ತೀರ ಸಹಜವಾಗಿರುವ ಮೂಲ ಗುಣಗಳನ್ನು ಕೆದಕಿ, ಬೆದಕಿ, ಒಳಹೊಕ್ಕು, ಒಳಗಿಳಿದಷ್ಟೂ ಬೆರಗುಗೊಂಡು, ಆ ಗುಣಗಳ ಅಪ್ಪಟ ದರ್ಶನವನ್ನು ತನ್ನ ರಕ್ತದೊಂದಿಗೆ ಬೆರೆತು ಬಂದಿರುವ ದೃಶ್ಯ ಮಾಧ್ಯಮದಲ್ಲಿ ದಾಖಲಿಸಿದ್ದಾನೆ. ಅವನು ಚಿತ್ರಗಳ ವಸ್ತು ಆರಿಸುವಾಗ, ಚಿತ್ರಕಥೆ ಬರೆಯುವಾಗ, ನಿರ್ದೇಶಿಸುವಾಗ ಮತ್ತು ಅದಕ್ಕೆ ಸಂಬಂಧಿಸಿದ ಇತರೆ ಪರಿಕರಗಳನ್ನು ನಿರ್ಧರಿಸುವಾಗ ತೀರ ಸೂಕ್ಷ್ಮಗ್ರಾಹಿಯಾಗಿ ವರ್ತಿಸಿದ್ದಾನೆ. ಇದು ಅವನ ಚಿತ್ರಗಳನ್ನು ನೋಡುವ ಯಾರಿಗಾದರೂ ಥಟ್ಟನೆ ತಟ್ಟುವ ಅಂಶ. ಇವೆಲ್ಲದರಿಂದ ಎಲ್ಲೇ ಆಗಲಿ ಚಲನಚಿತ್ರದ ವ್ಯಾಕರಣ, ಅಭ್ಯಾಸ, ಮೆಚ್ಚುವ ಬಗೆ ಇತ್ಯಾದಿಗಳು ಇರುವಲ್ಲೆಲ್ಲ ಬರ್ಗ್‌ಮನ್ ಇಲ್ಲದಿರುವುದನ್ನು ಊಹಿಸುವಂತೆಯೇ ಇಲ್ಲ.

ಇಂದಿಗೆ ಸುಮಾರು 47 ವರ್ಷಗಳ ಹಿಂದೆ 1957ರಲ್ಲಿ ನಿರ್ಮಿಸಿದ ಚಿತ್ರ 'ವೈಲ್ಡ್ ಸ್ಟ್ರಾಬೆರೀಸ್' (ಕಾಡು ಹುಲ್ಲು). ಅದೆಷ್ಟು ಸಲ ನೋಡಿದರೂ ಮತ್ತೆ ಅಲ್ಲಲ್ಲಿ ಹಠಾತ್ ಎದುರಾಗುವ ಕ್ಯಾಮರಾ ಚಲನೆ, ತೀರ ಹತ್ತಿರಕ್ಕೊಯ್ಯುವ ಕ್ಲೋಸ್‌ಅಪ್ ಶಾಟ್, ಸೀಳಿ ಬಗೆಯುವ ನೋಟ, ಆಳ ವಿಸ್ತಾರಗಳನ್ನು ಒಳಗೊಳ್ಳುವ ಪಾತ್ರಗಳ ಮುಖಭಾವ, ಒಟ್ಟಾರೆ ಬರೆದ ಚಿತ್ರಗಳಂತಿರುವ ದೃಶ್ಯ ಸಂಯೋಜನೆ ಮತ್ತು ಇವೆಲ್ಲ ಕೂಡಿ ಹೊಮ್ಮಿಸುವ 'ಧ್ವನಿ' ಈಗಲೂ ಮೈಮೇಲೆ ಝುರಿ ಹರಿದಂತಾಗುವುದು ಸಾಮಾನ್ಯವಾದ ಅನುಭವ. ಇದರ ಪರಿಣಾಮಕ್ಕೆ ಪೂರಕವಾಗಿ ಕಥೆಯ ಸಂದರ್ಭಕ್ಕೆ, ಮುಖ್ಯ ಪಾತ್ರಕ್ಕೆ ಹೊಂದಿಕೊಂಡಂತೆ ಅಂತರ್ಭಾವ (motif) ಬಳಸುತ್ತಾನೆ.

ಬರ್ಗ್‌ಮನ್ 'ವೈಲ್ಡ್ ಸ್ಟ್ರಾಬೆರೀಸ್'ನ್ನು ಅವನ ಇತರೆ ಚಿತ್ರಗಳಿಗೆ ಹೋಲಿಸಿದರೆ ಅಪರೂಪವೆನಿಸುವ, ಕೊಂಚ ಅಂತಃಕರಣ ಮಿಡಿಯುವ ರೀತಿಯಲ್ಲಿ ಪ್ರಸ್ತುತಪಡಿಸುತ್ತಾನೆ. ಚಿತ್ರದ ಕಥಾವಸ್ತು ನಾವು ಕಥೆ, ಕಾದಂಬರಿಗಳಲ್ಲಿ ಓದಿರುವಂಥದ್ದು. ಇಳಿವಯಸ್ಸಿನ ವ್ಯಕ್ತಿಯೊಬ್ಬ ತನ್ನ ಇಡೀ ಜೀವನವನ್ನು ಅವಲೋಕಿಸಿ, ಗಟ್ಟಿ-ಜಳ್ಳು ಸಂಬಂಧಗಳ ಹಿನ್ನೆಲೆಯಲ್ಲಿ ಬಾಳಿನ ಸಾರ್ಥಕತೆಯನ್ನು ಕಂಡುಕೊಳ್ಳುವ ಪ್ರಯತ್ನವನ್ನು ಅನಿವಾರ್ಯವಾದ ಸಾವಿನ ಮುಖಾಮುಖಿಯಲ್ಲಿ ತೆರೆದಿಡುತ್ತದೆ. ಚಿತ್ರ ಕಪ್ಪು-ಬಿಳುಪು ಆಗಿರುವುದೂ ಕೂಡ ಬರ್ಗ್‌ಮನ್‌ನ ಆಶಯಕ್ಕೆ ಪೂರಕವಾಗಿದೆ.

ತನ್ನ 50 ವರ್ಷಗಳ ವೈದ್ಯ ವೃತ್ತಿಗಾಗಿ ನೀಡಲಾಗುವ ಗೌರವ ಪದವಿ ಪಡೆಯುವುದಕ್ಕೆ ಪ್ರೊಫೆಸರ್ ಐಸಾಕ್ ಬೋರ್ಗ್ ಪ್ರಯಾಣದ ಸಿದ್ಧತೆಯಿಂದಲೇ ಎದುರಾಗುವ ದೃಶ್ಯ ಸುರಳಿ ಪ್ರಾರಂಭದಲ್ಲೇ ಅವನ

## ಇಂಗ್‌ಮರ್ ಬರ್ಗ್‌ಮನ್

ಸ್ವೀಡನ್ನಿನಲ್ಲಿ 1918ರಲ್ಲಿ ಹುಟ್ಟಿದ ಬರ್ಗ್‌ಮನ್ ಸಾಹಿತ್ಯ ಮತ್ತು ಕಲೆಯ ಇತಿಹಾಸದ ಪದವೀಧರ. ಪ್ರಾರಂಭದಿಂದಲೂ ಅವನ ಆಸಕ್ತಿ ಆಧ್ಯಾತ್ಮಿಕ ಮತ್ತು ಮಾನಸಿಕ ಸಂಘರ್ಷಗಳ ಬಗ್ಗೆ. ದೃಶ್ಯ ಮಾಧ್ಯಮದಲ್ಲಿ ಅವನದು ಆತ್ಮೀಯವಾದ ಗಾಢವಾದ, ಸಂಕೀರ್ಣವಾದ ಶೈಲಿಯ ಅಭಿವ್ಯಕ್ತಿ. ನಟರ ಅಭಿನಯದಲ್ಲಿ ಅವನು ಒತ್ತು ಕೊಡುವುದು ಅವರ ಮುಖದ ಕ್ಲೋಸ್‌ಅಪ್‌ಗಳಿಗೆ ಹಾಗೂ ಸಾಮಾನ್ಯವಾಗಿ ಅವರ ಕೈಗಳಿಗೆ. ಮೊದಲಿನದಕ್ಕೆ ಸಂಬಂಧಿಸಿದಂತೆ ಭಾರತೀಯ ಚಿತ್ರ ನಿರ್ದೇಶಕ ಗುರುದತ್‌ನನ್ನು ಈ ಶೈಲಿಯ ರೀತಿಗೆ ಹೋಲಿಸಬಹುದೆಂದು ವಿಮರ್ಶಕರ ಅಭಿಪ್ರಾಯ. ಅವನು 'ವೈಲ್ಡ್‌ಸ್ಟ್ರಾಬೆರೀಸ್' ಅಲ್ಲದೆ ಅವನ ಉತ್ಕೃಷ್ಟ ಚಿತ್ರ ಎಂದು ಭಾವಿಸಲಾಗಿರುವ ಹೆಣ್ಣಿನ ಅಂತರಂಗವನ್ನು ಶೋಧಿಸುವ 'ಪರ್ಸೊನಾ' (1966), 'ಸೈಲೆನ್ಸ್ ಟ್ರಯಾಲಜಿ' ಎಂದು ಪ್ರಸಿದ್ಧವಾಗಿರುವ ಮೂರು ಚಿತ್ರಗಳ ಜೊತೆ ಆತ್ಮಚರಿತ್ರೆಯ ಅಂಶಗಳಿರುವ 'ಫ್ಯಾನಿ ಅಂಡ್ ಅಲೆಕ್ಸಾಂಡರ್' (1983) ಇತ್ಯಾದಿ ಚಿತ್ರಗಳನ್ನು ನಿರ್ಮಿಸಿದ್ದಾನೆ.



1957ರಲ್ಲಿಯೇ 'ವೈಲ್ಡ್ ಸ್ಟ್ರಾಬೆರೀಸ್' ಚಿತ್ರ ಗೋಲ್ಡನ್ ಬರ್ಲಿನ್ ಬೇರ್ ಪ್ರಶಸ್ತಿ ಪಡೆದದ್ದರಿಂದ ಪ್ರಾರಂಭಿಸಿ 1998ರಲ್ಲಿ ಕ್ಯಾನೆ ಚಲನಚಿತ್ರೋತ್ಸವದಲ್ಲಿ ಅವನ ಜೀವನ ಸಾಧನೆಗಾಗಿ ಕೊಟ್ಟ ಪ್ರಶಸ್ತಿವರೆಗೆ ಪಟ್ಟಿಮಾಡಲು ಹೋದರೆ ಕೈ ಬಿದ್ದು ಹೋಗುತ್ತದೆ.

ಮನಃಸ್ಥಿತಿಯನ್ನು ಬಿಂಬಿಸುವಂತೆ ಚಡಪಡಿಸುವ ಅವನ ದುಃಸ್ವಪ್ನವನ್ನು ಬಿಚ್ಚಿಡುತ್ತದೆ. ಅದರ ದೃಶ್ಯರೂಪದಲ್ಲಿ ಶವಪೆಟ್ಟಿಗೆಯನ್ನು ಸಾಗಿಸಿಕೊಂಡು ಬರುವ ವಾಹನದ ಚಕ್ರವೊಂದು ಮುರಿದು ತುಂಡಾದ ದೀಪದ ಕಂಬಕ್ಕೆ ಬಡಿದು ನೆಲಕ್ಕುರುಳುತ್ತದೆ. ಶವಪೆಟ್ಟಿಗೆಯ ಮುಚ್ಚಳ ತೆರೆದು ಒಳಗಿರುವ ದೇಹದ ಮುಖದ ಮೇಲೆ ಕ್ಲೋಸ್ ಅಪ್‌ನಲ್ಲಿ ಬೋರ್ಗ್ ಕಂಡಾಗ ನಾವು ಬೆಚ್ಚಿ ನಮ್ಮ ಇಂದ್ರಿಯಗಳನ್ನು ಜಾಗ್ರತಗೊಳಿಸುತ್ತೇವೆ. ಇದರ ಪ್ರಭಾವದಿಂದ, ಬಾಳಿಗೊಂದು ಅರ್ಥ ಹುಡುಕಲು ಪ್ರಯಾಣದ ರೀತಿಯನ್ನು ಬದಲಿಸಿ ಸೊಸೆಯ ಜೊತೆ ದೂರದ ಊರಿಗೆ ಕಾರಿನಲ್ಲಿ ಹೊರಡುವ ಬೋರ್ಗ್‌ನ ಮಾನಸಿಕ ಲಯಕ್ಕೆ ಹೊಂದಿಕೊಳ್ಳುತ್ತೇವೆ. ಮಗ ವಾಲ್ಡ್ ಮತ್ತು ಸೊಸೆ ಮೇರಿಯಾನರ ಸಂಬಂಧ ಹಳಸಿಕೊಂಡಿರುತ್ತದೆ. ಆದರೆ ಸೊಸೆ ಮತ್ತೆ ಸಂಬಂಧ ಚಿಗುರಿಸುವ ಕಡೆ ಒಲವು ತೋರಿಸುತ್ತಾಳೆ. ಮನೆಯಲ್ಲಿ ಬೋರ್ಗ್‌ನ ದೈನಂದಿನ ಅಗತ್ಯಗಳನ್ನು ಪೂರೈಸಲು ಒಬ್ಬಳು ಪರಿಚಾರಿಕೆ. ಇವೆಲ್ಲ ಪಾತ್ರಗಳು ಒಂದರೊಡನೊಂದು ಬಿಚ್ಚು ಮನಸ್ಸಿನಿಂದ ಹಗುರಾಗಿ ಬೆರೆಯದ ಜೀವಗಳಾಗಿ ತಮ್ಮಷ್ಟಕ್ಕೆ ತಾವು ಹಿಂಸೆಗೊಳಗಾಗಿ ಒಂಟಿತನದ ನಿರ್ವಾತದಲ್ಲಿರುತ್ತವೆ. ಈ ಅಂಶಗಳ ಸಂವಹನೆ ಸಮರ್ಪಕವಾಗಿ, ಅದರ ಗಾಢತೆ ತಟ್ಟಲೆಂದು, ಹಿನ್ನೆಲೆ ಸಂಗೀತ ಮಿತವಾಗಿ ಬಳಕೆಯಾಗಿದೆ.

ಪ್ರಯಾಣದಲ್ಲಿ ಅವನು ಚಿಕ್ಕವನಾಗಿದ್ದಾಗ ಕಳೆದ ಭಾರಿ ಮನೆಯಲ್ಲಿ ಈಗ ಒಂಟಿಯಾಗಿರುವ ತಾಯಿಯನ್ನು ಭೇಟಿ ಮಾಡುತ್ತಾನೆ. ಇಡೀ ಘಟನೆ ನಿರ್ಭಾವುಕ ರೀತಿಯಲ್ಲಿ ಬಿಂಬಿತವಾಗಿದ್ದರೂ ತೀರ ಉಚಿತವಾದ ಶಾಟ್‌ಗಳಲ್ಲಿ ಬೋರ್ಗ್‌ನ ಕಣ್ಣು ಚಲಿಸುವ ಗತಿಯಲ್ಲಿ ಅವನು ತನ್ನನ್ನು ಶೋಧಿಸಲೆತ್ನಿಸುವುದು ವ್ಯಕ್ತವಾಗುತ್ತದೆ. ಇಂತಹ ದೃಶ್ಯಗಳಲ್ಲಿ ಮತ್ತು ಮುಂದೆ ಬರುವ ಅನೇಕ ಶಾಟ್‌ಗಳಲ್ಲಿ ನಮ್ಮೊಳಗೆ ನುಗ್ಗುವ ಬೋರ್ಗ್‌ನ ಅಭಿನಯಕ್ಕೆ, ಅದನ್ನು ನಿರ್ವಹಿಸುವುದಕ್ಕಾಗಿ ಆ ಪಾತ್ರಕ್ಕೆ ನೂರಕ್ಕೆ ನೂರರಷ್ಟು ಒಪ್ಪುವ ಆ ಬಗೆಯ ಕಣ್ಣಿರುವ ನಟನನ್ನು

(ವಿಕ್ಟರ್ ಜೋಸ್ಟ್ರಾಯ್) ನನ್ನು ಬರ್ಗಮನ್ ಆರಿಸಿದ್ದಾನೆ. ಅವನ ವಯಸ್ಸಾದ ಸಪ್ಪೆ ಮುಖದ ಗೆರೆಗಳು ಮತ್ತು ಉದ್ದೇಶಿತ ಭಾವ ಪ್ರಕಟಣೆಗೆ ಹಿಡಿತಕ್ಕೊಳಗಾಗಿ ಚಲಿಸುವ ಗುಡ್ಡೆ, ರೆಪ್ಪೆಗಳಿರುವ ದೊಡ್ಡ ಕಣ್ಣುಗಳು ಅಗತ್ಯವಾದ ಸಹಾಯ ನೀಡಿವೆ. ಮುಂದುವರಿದ ಬೋರ್ಗ್‌ನ ಪ್ರಯಾಣದಲ್ಲಿ ಹೆಂಡತಿಯನ್ನು ಗೋಳು ಹೊಯ್ದುಕೊಳ್ಳುವ ದಂಪತಿ ಸಿಗುತ್ತಾರೆ. ಕಾರು ನಿಲ್ಲಿಸಿ ಅವರೊಡನೆ ಸಂಭಾಷಣೆಗಿಳಿಯುವ ಹಿನ್ನೆಲೆಯಲ್ಲಿ ಅವನು ತನ್ನ ಹೆಂಡತಿಯನ್ನು ಕೆಟ್ಟದಾಗಿ ನಡೆಸಿಕೊಂಡದ್ದು ಪ್ರತಿಫಲಿತವಾಗುವುದನ್ನು ವಿಷಾದ ನೋಟದಿಂದ ನೋಡುತ್ತಾನೆ. ಅವನಿಗೆ ವೈದ್ಯನಾಗಿ ಕಾರ್ಯ ನಿರ್ವಹಿಸಿದ ಊರು ಸಿಗುತ್ತದೆ. ಆದರೆ ಅದೆಲ್ಲ ಬದಲಾಗಿರುತ್ತದೆ. ಇನ್ನೂ ಮುಂದೆ ಪರಸ್ಪರ ರೇಗಿಸಿ, ಜೀವಂತಿಕೆಯಿಂದ ಪುಟಿಯುವ ಹದಿವಯಸ್ಸಿನಲ್ಲಿರುವ ಗುಂಪೊಂದು ಕಂಡಾಗ ಅವರ ಜೊತೆಯಲ್ಲಿರುವ ಹುಡುಗಿ ಬೋರ್ಗ್‌ಗೆ ಅವನ ಪ್ರಥಮ ಪ್ರೇಮ ಪ್ರಕರಣವನ್ನು ನೆನಪಿಸುತ್ತಾಳೆ. ಪ್ರಯಾಣದಲ್ಲಿ ಮುಂದೆ ಮುಂದೆ ಹೋದಷ್ಟೂ ಬೋರ್ಗ್ ಗತಜೀವನದಲ್ಲಿ ಹಿಂದೆ ಹಿಂದಕ್ಕೆ ಹೋಗಿ ಸಂಸಾರದಿಂದ ದೂರವಾಗಿ, ವೃತ್ತಿಯಲ್ಲಿನ ಪರಿಣತಿ ಫಲಕಾರಿಯಾಗದೆ ಇಡೀ ಜೀವನದಿಂದಲೇ ಹೊರಗುಳಿದದ್ದು ಅನುಭವಕ್ಕೆ ಬಂದು ವಿಷಣ್ಣನಾಗುತ್ತಾನೆ. ಅಲ್ಲಿಯ ತನಕದ ಜೀವನ ಖಾಲಿ ಎಂದು ಸೂಚಿಸುವಂತೆ ಅವನು ಡಾಕ್ಟರಿಕೆಗೆ ಸಂಬಂಧಿಸಿದ ಪರೀಕ್ಷೆಯಲ್ಲಿ ಹೀನಾಯವಾಗಿ ಸೋಲುವ ದುಃಸ್ವಪ್ನದ ಭಾಗಗಳು ಅತಿವಾಸ್ತವತೆಯ ರೂಪದಲ್ಲಿ ಕೆಲವು, ಮತ್ತೆ ಕೆಲವು ಸರಳತೆಯ ರೂಪದಲ್ಲಿ ನಿರೂಪಿಸಲ್ಪಟ್ಟಿವೆ. ಹೀಗೆ ತನ್ನಿಂದ ತಾನು ದೂರ ನಿಂತು ಅವಲೋಕಿಸಿದ ನಂತರ ಅವನು ಸಹಜ ಮಾನವ ಸಂಬಂಧಕ್ಕೆ ಹಂಬಲಿಸುತ್ತಾನೆ. ಇದರ ಮೊದಲನೆ ಕ್ರಿಯೆ ಎನ್ನುವಂತೆ ಮಗ-ಸೊಸೆಯ ಸಂಬಂಧವನ್ನು ಮತ್ತೆ ಮೊದಲಿನ ಸ್ಥಿತಿಗೆ ತರಲು ತೊಡಗುತ್ತಾನೆ. ವೀಕ್ಷಕರೂ ಮೆಚ್ಚುಗೆಯಿಂದ ತಲೆತೂಗುವಂತೆ ಮಾಡುತ್ತಾನೆ. ●




**ಎ.ಎನ್.ಪ್ರಸನ್ನ,**
**ನಂ.26, 11ನೇ ಮೈನ್,**
**13ನೇ ಕ್ರಾಸ್, ಪದ್ಮನಾಭನಗರ,**
**ಬೆಂಗಳೂರು - 560 070**


---

ಒಗ್ಗರಣೆ

## ನಾನೇ ಗೆದ್ದಿದ್ದು

"ಗೌಡ್ರೆ ನಮ್ಮ ಟಾಮಿ ನಂಜೊತೆ ಚೆಸ್ ಆಡುತ್ತೆ ಗೊತ್ತೇನ್ರಿ" ಸಿಂಗ್ ಹೆಮ್ಮೆಯಿಂದ ಬೀಗಿದರು.

"ಫೆಂಟಾಸ್ಟಿಕ್.. ನಿಮ್ಮ ನಾಯಿ ಭಾರೀ ಇಂಟೆಲಿಜಂಟ್ ಅಂತ ಅನ್ನುತ್ತೆ.."

"ಏನು ಇಂಟೆಲಿಜಂಟೋ ಏನೋ.. ಆಡಿರೋ ಹತ್ತು ಆಟಗಳಲ್ಲಿ ನಾನೇ ಗೆದ್ದೆ ನೋಡಿ ಗೌಡ್ರೆ.."

## ಒಂದು ಹಳೇ ಜೋಕು



ಕಳ್ಳರಿಬ್ಬರೂ ಹಳೆ ಕಾಲದ ಥರ ಪುಟ್ಟದೊಂದು ಬ್ಯಾಂಕನ್ನು ದೋಚಿದರು. ಮೊದಲನೆಯವ ಕೇಳಿದ :

"ದುಡ್ಡು ಎಣಿಸೋಣವೇನೋ.."

ಎರಡನೆಯವ ಸಿಗರೇಟ್ ಹೊತ್ತಿಸಿ ಉತ್ತರಿಸಿದ :

"ಜರೂರತ್ತಿಲ್ಲ, ನಾಳೆ ಬೆಳಗ್ಗೆ ಪೇಪರ್ ನೋಡಿದರಾಯ್ತು ಬಿಡು"

❑ ಕೆ. ಎಲ್. ಚಂದ್ರಶೇಖರ ಐಜೂರ್

# ದೇವರುಗಳ ಹರಾಜಿನಲ್ಲಿ

ಅಪಘಾನಿಸ್ತಾನದ ರಾಜ ಬೀದಿಯಲಿ
ಕೊಳೆತ ಸಾವಿರ ಹೆಣಗಳ ಮಧ್ಯೆ
ಆ ಹುಡುಗಿಯ ಶವವಿತ್ತು.
ಯಾರೋ ಎಸೆದ ಬಾಂಬಿಗೆ,
ಪಾಪಿಗಳು ಸತ್ತರು.
ಆ ಹುಡುಗಿ ಕೂಡ. ಅವಳಿನ್ನು ಚಿಕ್ಕವಳು
ಯಾರ ಮನೆಯ ಪ್ರೀತಿಯ ಹೂವೋ
ಯಾವ ಹುಡುಗನ ಮೀಸಲೋ
ಮುಖದ ಮೇಲಿನ ಪರದೆ ಸರಿದಿರಲಿಲ್ಲ
ಕೈಯಲ್ಲಿದ್ದ ಗಾಜಿನ ಲೋಟ ಒಡೆದಿತ್ತು.
ಒಂದೊಂದು ಚೂರಿನಲೂ ನೂರು ನೂರು ದೇವರು
ಅಲ್ಲಿ ಇನ್ನೊಂದು ಬೀದಿಯಲಿ
ಬುದ್ಧನನ್ನು ಕೊಲ್ಲುತ್ತಿದ್ದರು.
ಬುದ್ಧ ನಗುತ್ತಿದ್ದ.
ಇಲ್ಲಿ ಇಂಡಿಯಾ ದೇಶದ ನರಕದಲ್ಲಿ
ಕಿಕ್ಕಿರಿದ ಮಾರ್ಕೆಟ್‌ನ ತುಂಬಾ ದೊಡ್ಡ ಬೋರ್ಡು:
'ರಕ್ತ ಮಾರಾಟಕ್ಕಿದೆ;
ಶವದ ಪೆಟ್ಟಿಗೆ ಉಚಿತ.'
ಭೂಮಿಯ ಮಾನ ದೋಚಿ ಹೋದವರು
ಭ್ರೂಣಕ್ಕೆ ಕತ್ತಿ ನುಗ್ಗಿಸಿದರು. ಹರಾಜಿಗಿಟ್ಟ ಆಕಾಶಲ್ಲಿ ಮಳಯಿಲ್ಲ
ದೇವರ ಬೆತ್ತಲೆ ಮಾಡಿ ಬೀದಿಗೆ ಬಿಟ್ಟರು
ಚಿಂದಿ ಆಯುವ ಹುಡುಗನ ಕನಸಿನ ತುಂಬಾ ಮುಳುಗಿದ ಟೈಟಾನಿಕ್ ಚಿತ್ರ
ಇಲ್ಲಿ ಆತ್ಮ ಸಾಕ್ಷಿಗಳನ್ನು
ನಡುಬೀದಿಯಲಿ ಕೊಲ್ಲಲಾಗುತ್ತೆ
ಬೆತ್ತಲೆ ದೇವರು
ಬಣ್ಣ ಮೆತ್ತಿಕೊಂಡ ದೇವರು
ಬೀದಿ ಬದಿ ಮಾರಾಟಕ್ಕುಂಟು
ಬುದ್ಧ ಇನ್ನೂ ನಗುತ್ತಿದ್ದಾನೆ.

# ರೈಲು ಹೋದ ಮೇಲೆ



ರೈಲ್ವೇ ಪ್ಲಾಟ್‌ಫಾರ್ಮಿನ
ಆ ನೀರವ ಕ್ಷಣಗಳು;
ನಿರೀಕ್ಷೆ ಮೀರಿ ಸುರಿದ ಅವತ್ತಿನ ಮಳೆ
ಅವಳನ್ನು ಬೋಗಿಯೊಳಕ್ಕೆ ತಲುಪಿಸಿ
ವಿದಾಯ ಹೇಳುವಾಗ
ಕೃತಕವಾಗಿ ನಗಲೆತ್ನಿಸಿದೆ
ಅವಳು ನಗಲಿಲ್ಲ.
ರೈಲು ಸಿಳ್ಳೆ ಹಾಕಿತು
ಬೆನ್ನಿಂದ ಕಪ್ಪು ಹೊಗೆ ಕಕ್ಕಿತು
ನೀರಿನ ಬಾಟಲ್ ಚಿಪ್ಸ್ ಪ್ಯಾಕೇಟ್
ಒಂದು ಮೊಳ ಮಲ್ಲಿಗೆ,
ಬೇಂದ್ರೆಯ ಪುಸ್ತಕವೊಂದನ್ನು ತಂದು ಕೊಟ್ಟೆ
ಅವಳು ಮುಖ ನೋಡಿದಳು
ನಾನವಳ ಕಣ್ಣು ನೋಡಿದೆ
ಯಾತನೆಯ ನೀರು
ದಿಕ್ಕಿಲ್ಲದ ಸಾಲುಗಳು ದಗ್ಧಗೊಂಡಿದ್ದವು
ವಿನ್ಸೆಂಟ್‌ವ್ಯಾನ್‌ಗೋ ನೆನಪಾದ;
ರೈಲಿನ ಚಿತ್ರಕ್ಕೆ ಜೀವ ಬಂತು
ನನ್ನ ಪುಟ್ಟ ಹೃದಯ
ಪದ್ಯ ಗೀಚುತ್ತಿತ್ತು.
ಆ ಚಕ್ರಕ್ಕೆ ಇನ್ನಷ್ಟು
ಜೀವ ಬಂದು ಕೊಬ್ಬಿ ಓಡುತ್ತಿತ್ತು
ಅದರ ವೇಗಕ್ಕೆ ನನ್ನ ತಲೆಕೊಡಲೆ?
ಪ್ಲಾಟ್‌ಫಾರ್ಮಿನ ಹಾದಿ ಮುಗಿದಿತ್ತು
ಕಿಟಕಿಯಲ್ಲಿ ಅವಳ ಮುಖ ಕಾಣಲಿಲ್ಲ
ರೈಲಿನ ವೇಗ ನನ್ನ ಸಾವನ್ನು ದೂರ ತಳ್ಳಿತು
ಇನ್ನೊಂದು ರೈಲು ಬಂತು
ಜನ ಇಳಿದರು
ಕೂಲಿಗಳು ಕಾದಾಟದಲ್ಲಿದ್ದರು
ದೂರದ ಮೈದಾನದಲ್ಲಿ ಗುಜರಿ ಆಯುವ ನನ್ನಂಥ
ಹುಡುಗರು
ಹೋಗಿ ಬರುವ ರೈಲುಗಳಿಗೆ
ಕೈ ಬೀಸುತ್ತಿದ್ದರು
ನನ್ನ ಮೌನದ ಕಟ್ಟೆಯೊಡೆಯಿತು
ನಾನು ಬೇಯುತ್ತಿದ್ದೆ
ಅವತ್ತು ಸುರಿದ ಮಳೆಯಲ್ಲಿ
ನನ್ನ ಕಣ್ಣೀರಿನ ತೂಕ ತಿಳಿಯಲಿಲ್ಲ
ಆಗ ಆ ಮಳೆಯಲ್ಲಿ
ನನ್ನೆಲ್ಲ ಮೌನಗಳು ಮಾತಾಡುತ್ತವೆ.

# ಅವನ ಸಾವು

ಎಂದೋ ತೀರಿಹೋದ ಗೆಳೆಯನ
ನೆನಪು ಸರಿಹೊತ್ತಿನಲ್ಲಿ
ಅವನ ಮನೆಯ ಕದ ಬಡಿಯುವಂತೆ ಮಾಡಿತು
ಅವನ ಕಿರಿದಾದ ಕೋಣೆಯಲ್ಲಿ
ಕತ್ತಲು ತುಂಬಿತ್ತು
ಆ ಕತ್ತಲಲ್ಲೂ ಕಾರ್ಲ್‌ಮಾರ್ಕ್ಸ್,
ಗಾಂಧಿ ಗೋಡೆಗಂಟಿದ್ದರು
ಅವನ ಗೈರು ಹಾಜರಿಯನ್ನು
ಜಗತ್ತಿಗೆ ಸಾರಿ ಸಾರಿ ಹೇಳುವ
ಎಂದೋ ನಿಂತು ಹೋಗಿರುವ ಪುಟ್ಟಗಡಿಯಾರ;
ಗುಬ್ಬಚ್ಚಿಯ ರಂಗೋಲಿ
ಬಿರುಕು ಬಿಟ್ಟಿರುವ ಶೀಲ್ಡ್
ಗೆದ್ದಲಿಡಿದು ಮೂಲೆ ಸೇರಿರುವ ಕ್ರಿಕೆಟ್ ಬ್ಯಾಟ್
ಹೈಸ್ಕೂಲು ದಿನಗಳ ನಮ್ಮ
ಕಪ್ಪು ಬಿಳುಪು ಫೋಟೊ
ಅವನ ಟ್ರಂಕಿನ ಹೊಟ್ಟೆಯೊಳಗೆ
ಅಂಥ ರಹಸ್ಯವಿರಲಿಲ್ಲ
ಜೇಬಿಲ್ಲದ ಅಂಗಿ
ಪ್ಯಾಂಟ್ ಹರಿದು ನಿಕ್ಕರ್ ಮಾಡಿಕೊಂಡಿದ್ದ
ಅವನ ಜೀನ್ಸ್
ಗಾರ್ಕಿ, ಲೆನಿನ್, ಅಂಬೇಡ್ಕರ್ ಇಷ್ಟೇ.

ಯಾವತ್ತೋ ಬರೆದು ಅರ್ಧಕ್ಕೆ ನಿಂತು
ಗೀಚಿ ಚಿತ್ತು ಕಾಟು ಮಾಡಿ
ಡೇಟಿಲ್ಲದೆ ಮುದುರಿ ಹೋಗಿರುವ ಹಾಳೆಯಲ್ಲಿ
ವಿಪ್ಲವ ಗೀತೆಯೋ ಅಥವಾ ಯಾವಳಿಗೋ ಬ
ಪ್ರೇಮ ಪತ್ರವೋ?
ಅವನ ಸಾವು ನನ್ನೊಳಗಿನ ಹಾಡಾಗಿದೆ.
ಕ್ಷಮಿಸು ಗೆಳೆಯ,
ನಿನ್ನ ಗೋರಿಯ ಮೇಲೆ
ಗುಲಾಬಿಯಿಟ್ಟು ಕಣ್ಣೀರಿಡಲಾರೆ
ನಾವಿಬ್ಬರು ಹಸಿವು ಮರೆತು
ಹಂಬಲಿಸಿದ ಕ್ರಾಂತಿ
ರಕ್ತ ಕುದಿಯುವ ವಯಸ್ಸಲ್ಲಿ
ಬರೆದ ಆವೇಶದ ಗೋಡೆ ಬರಹಗಳು
ಮೊನ್ನೆ ಸುರಿದ ಮಳೆಗೆ ಮಾಸುತ್ತಿದೆ
ಮರೆತಷ್ಟು ಎದೆ ಸೀಳುವ ಆ ದಿನಗಳು
ನಮ್ಮೊಂದಿಗೆ ಮಾರ್ಕ್ಸ್ ಇದ್ದ
ಮುಕೇಶ್ ಇದ್ದ.



ಕೆ.ಎಲ್.ಚಂದ್ರಶೇಖರ ಐಜೂರ್, ಅಂತಿಮ ಎಲ್.ಎಲ್.ಬಿ., ಪಿ.ಜಿ. ಹಾಸ್ಟೆಲ್-5,
ಜ್ಞಾನಭಾರತಿ, ಬೆಂಗಳೂರು

ಉಲ್ಲೇಖ

# ಸಂಸತ್ತಿನಲ್ಲಿ ಕನ್ನಡ ಡಿಂಡಿಮ



**ಜೆ. ಹೆಚ್. ಪಟೇಲರು ಪ್ರತಿಭಾವಂತ ರಾಜಕಾರಣಿ. ಸಮಾಜವಾದಿ. ಕನ್ನಡದ ಪರವಾಗಿ ಚಿಂತಿಸಿದ ಅಪರೂಪದ ರಾಜಕಾರಣಿ ಇವರಾಗಿದ್ದರು. ಆಡಳಿತದ ಸಂದರ್ಭದಲ್ಲಿ ಜನಭಾಷೆ ರೂಢಿಗೆ ಬರಬೇಕೆಂಬ ಚಿಂತನೆ ಅವರದಾಗಿತ್ತು. ಅದು ಅವರ ಹೋರಾಟದ ದಿಕ್ಕನ್ನೂ ನಿರ್ಧರಿಸಿತು.**

**ವಿಧಾನಸಭೆ ಪ್ರವೇಶಿಸುವ ಮೊದಲೇ 1967-70 ರ ಅವಧಿಯ 4ನೇ ಲೋಕಸಭೆಯಲ್ಲಿ ಪಟೇಲರು ಶಿವಮೊಗ್ಗ ಕ್ಷೇತ್ರವನ್ನು ಪ್ರತಿನಿಧಿಸಿದ್ದಾಗ ಸಂಸತ್ತಿನಲ್ಲಿ ಕನ್ನಡದಲ್ಲಿ ಮಾತು ಮೊಳಗಿಸಿದ್ದು ಸಣ್ಣ ಸಾಧನೆಯಲ್ಲ. ಅದೊಂದು ತೀವ್ರ ಆಂದೋಲನದ ಫಲ. ಜನರ ಮನದ ಮಿಡಿತಕ್ಕೆ ಹಾಗೆ ಧ್ವನಿಯಾದವರು ಪಟೇಲರು.**

**ವಿಧಾನಸಭೆಯಲ್ಲಿ ಜನರು ಮಾಡಿದ ಭಾಷಣಗಳಲ್ಲೂ ಕನ್ನಡವನ್ನು ಕುರಿತ ಅವರ ಚಿಂತನೆಗಳನ್ನು ಕಾಣಬಹುದು. ರಾಜಧಾನಿಯಾದ ಬೆಂಗಳೂರಿನಲ್ಲಿ ಕನ್ನಡ ಬೆಳೆಸಬೇಕೆಂಬ ಸಂಘಟಿತ ಪ್ರಯತ್ನ ಇಲ್ಲದಿರುವ ಬಗ್ಗೆ, ಸರ್ಕಾರದ ಹಿರಿಯ ಅಧಿಕಾರಿಗಳು ಕನ್ನಡದ ಬಗೆಗೆ ಕನಿಷ್ಠ ಮಟ್ಟದ ನಿಷ್ಠೆ, ಶ್ರದ್ಧೆ, ಆಸಕ್ತಿಯನ್ನೂ ತೋರದಿರುವ ಬಗ್ಗೆ, ಕನ್ನಡಿಗರ ಪರಭಾಷಾ ವ್ಯಾಮೋಹ ದಿಂದಾಗಿ ಜನರಿಗೆ ಅನ್ಯಾಯವಾಗುತ್ತಿರುವ ಬಗ್ಗೆ, ಇಂಗ್ಲಿಷ್ ಬಗೆಗಿನ ದಾಸ್ಯ ಮನೋಭಾವ ಇನ್ನೂ ಕಡಿಮೆಯಾಗದಿರುವ ಬಗ್ಗೆ ಪಟೇಲರಿಗೆ ಕಳವಳವಿತ್ತು. ದೂರದ ದಿಲ್ಲಿಯಲ್ಲಿನ ಸಂಸತ್ತಿನಲ್ಲಿ ಕನ್ನಡ ಮಾತನಾಡುವುದಕ್ಕಾಗಿ ಚಳವಳಿ ನಡೆಸಿದ್ದ ಪಟೇಲರಿಗೆ, ವಿಧಾನಸಭೆಗೆ ಆರಿಸಿ ಬಂದಾಗ, ರಾಜಧಾನಿಯಲ್ಲಿ ಅಧಿಕೃತ ಆಡಳಿತ ಭಾಷೆಯಾಗಿ ಕನ್ನಡ ಬಳಸುವ ಬಗೆಗಿನ ನಿರುತ್ಸಾಹ, ತಾತ್ಸಾರವನ್ನು ಕಂಡು ತುಂಬಾ ನೊಂದುಕೊಳ್ಳುವಂತಾಗಿತ್ತು.**

**ಪಟೇಲರ ಕನ್ನಡ ಧ್ವನಿ ಮೊಳಗುವವರೆಗೂ, ಸಂಸತ್ತಿನಲ್ಲಿ ಪ್ರಧಾನವಾಗಿ ಬಳಸುತ್ತಿದ್ದುದು ಹಿಂದಿ ಮತ್ತು ಇಂಗ್ಲಿಷ್‌ನ್ನು ಮಾತ್ರ. ಅಂಥ ಸ್ಥಿತಿಯಲ್ಲಿ ತಾವು ಪ್ರತಿನಿಧಿಸುವ ಸಾಮಾನ್ಯ ಮತದಾರರ ಆಶೋತ್ತರ ಮತ್ತು ಸಮಸ್ಯೆಗಳನ್ನು ಅವರ ಭಾಷೆಯಲ್ಲಿ ಸಂಸತ್ತಿನಲ್ಲಿ ವ್ಯಕ್ತಪಡಿಸಲು ಸಿದ್ಧರಾದರು ಪಟೇಲ್. ಅದಕ್ಕಾಗಿ ಪಟ್ಟು ಹಿಡಿದು ಗೆದ್ದರು. ಸಂಸದೀಯ ಇತಿಹಾಸದಲ್ಲೇ ಪಟೇಲರ ಈ ಹೋರಾಟ ಒಂದು ದಾಖಲೆ. ಅದು ಭಾರತೀಯ ಭಾಷೆಗಳನ್ನು ಸಂಸತ್ತಿನಲ್ಲಿ ಬಳಸಬೇಕೆಂಬ ಇತರ ಸದಸ್ಯರಿಗೆ ಸ್ಫೂರ್ತಿಯೂ ಆಯಿತು.**

**ಪಟೇಲರು ಸಂಸತ್ತಿನಲ್ಲಿ ಆಡಿದ ಕನ್ನಡ ಮಾತುಗಳಲ್ಲಿ ಕೆಲವನ್ನು ಇಲ್ಲಿ ಆಯ್ದುಕೊಳ್ಳಲಾಗಿದೆ. ಅವರ ಮಾತುಗಳ ಈ ಭಾಗಗಳಿಗಾಗಿ, ಕರ್ನಾಟಕ ವಿಧಾನ ಮಂಡಲ ಗ್ರಂಥಾಲಯ ಉಪಸಮಿತಿ ಪ್ರಕಟಿಸಿದ ಪ್ರತಿಭಾವಂತ ಸಂಸದೀಯ ಪಟುಗಳ ಬದುಕು ಬರಹ ಮಾಲಿಕೆಯಲ್ಲಿನ ಎಸ್. ಕೆ. ಶೇಷಚಂದ್ರಿಕಾ ಅವರ ಪುಸ್ತಕಕ್ಕೆ ಋಣಿಯಾಗಿದ್ದೇವೆ.**

---

ಮಾನ್ಯ ಅಧ್ಯಕ್ಷರೇ, ಸ್ವಾಮಿ, ಸಂವಿಧಾನಬದ್ಧವಾದ ನನ್ನ ಹಕ್ಕು ಚಲಾಯಿಸಲು, ಎಂದರೆ ನನ್ನ ಮಾತೃಭಾಷೆಯಲ್ಲಿ ಮಾತನಾಡಲು ತಾವು ಅವಕಾಶ ಕೊಟ್ಟದ್ದಕ್ಕೆ, ನನಗೆ ತುಂಬಾ ಸಂತೋಷವಾಗಿದೆ. ಇದಕ್ಕಾಗಿ ತಮಗೆ ವಂದಿಸುತ್ತೇನೆ. ಮೇಲಾಗಿ ತಾವು ಸಹ ನನ್ನ ಭಾಷೆಯನ್ನು ಅರ್ಥಮಾಡಿಕೊಳ್ಳಬಲ್ಲಿರೆಂದು ತಿಳಿದು ಬಹಳ ಆನಂದವಾಗಿದೆ.

ಸ್ವಾಮಿ, ನಾವೀಗ ಹಿಂದಿ ಅಥವಾ ಇಂಗ್ಲಿಷ್ ಭಾಷೆಗಳ ಸಮಸ್ಯೆ ಕುರಿತು ಚರ್ಚಿಸುತ್ತಿಲ್ಲ. ನಮ್ಮ ಮುಂದೆ ಮತ್ತು ಈ ದೇಶದ ಮುಂದಿರುವ ಈಗಿನ ಸಮಸ್ಯೆ ಆಹಾರದ ಕೊರತೆ. ಸಮಗ್ರ ಆಹಾರ ಕೊರತೆಯ ಸಮಸ್ಯೆಯ ಬಗ್ಗೆ ಒಂದು ರಾಷ್ಟ್ರೀಯ ಸಮಿತಿಯನ್ನು ನೇಮಿಸಬೇಕೆಂದು ನಾನು ಅಪೇಕ್ಷಿಸುತ್ತೇನೆ. ಈ ಸಮಿತಿಗೆ ದೇಶದ ಎಲ್ಲಾ ರಾಜಕೀಯ ಪಕ್ಷಗಳ ಸಹಕಾರವೂ ಲಭ್ಯವಾಗಬೇಕು.

**(ಲೋಕಸಭೆ ಕಲಾಪ, ಮಾರ್ಚ್ 3, 1967)**

## ಇಂಗ್ಲಿಷ್‌ಗಾಗಿ ಹುನ್ನಾರ

ನಮ್ಮ ರಾಜ್ಯಾಂಗದಲ್ಲಿ ನಮಗೆ ಸಮಾನ ಅವಕಾಶ, ಸ್ಥಾನಮಾನ ಮತ್ತು ಅಭಿವ್ಯಕ್ತಿ ಸ್ವಾತಂತ್ರ್ಯ ಕೊಟ್ಟಿದ್ದರೂ ಕೂಡಾ, ನನಗೆ ಮನವರಿಕೆಯಾದಂತೆ ನಮ್ಮ ಈ ಲೋಕಸಭೆಯಲ್ಲಿ ಅಂತಹ ವಾಕ್ ಸ್ವಾತಂತ್ರ್ಯ ನಮಗೆ ಇಲ್ಲವಾಗಿದೆ. ನಾನು ಅಧಿಕೃತ ಭಾಷೆಗಳ ತಿದ್ದುಪಡಿ ವಿಧೇಯಕದ ಸಂಬಂಧದಲ್ಲಿ ಒಂದು ವಿಧಿ ಬಿಂದುವಿನ ಬಗ್ಗೆ ಮಾತನಾಡಲು ಬಯಸುತ್ತೇನೆ. ಸಂವಿಧಾನದಲ್ಲಿ ಹಿಂದಿ ನಮ್ಮ ಅಧಿಕೃತ ಭಾಷೆಯಾಗಿದೆ. ಇಂಗ್ಲಿಷ್ ಭಾಷೆ 15 ವರ್ಷಗಳ ಕಾಲ ಅಂದರೆ, 1978ರವರೆಗೆ ಮುಂದುವರಿಯಬಹುದಾಗಿದೆ. 1963ರ ಅಧಿಕೃತ ಭಾಷಾಕಾಯ್ದೆ ಇಂಗ್ಲಿಷನ್ನು ದೆಹಲಿಯಲ್ಲಿ ಮಾತ್ರವಲ್ಲದೆ, ಭಾರತದ ಎಲ್ಲ ರಾಜ್ಯಗಳಲ್ಲೂ ಅಧಿಕೃತವಾಗಿ ಶಾಶ್ವತಗೊಳಿಸುವ ಹವಣಿಕೆಯಾಗಿದೆ. ಈ ಮಸೂದೆ ಕೂಡಾ ಇಂಗ್ಲಿಷನ್ನು ಅಧಿಕೃತ ಭಾಷೆಯಾಗಿ ಮುಂದುವರೆಸುವ ತಂತ್ರವಾಗಿದೆ. ಇದು ಸಂವಿಧಾನ ಬಾಹಿರ.

**(ಲೋಕಸಭೆ ಕಲಾಪ, ಡಿಸೆಂಬರ್ 7, 1967)**

## ಬೆಂಗಳೂರಲ್ಲಿ ದಕ್ಷಿಣ ವಿಶ್ವವಿದ್ಯಾಲಯ

ದಕ್ಷಿಣದಲ್ಲಿ ಕೇಂದ್ರ ವಿಶ್ವವಿದ್ಯಾಲಯ ಸ್ಥಾಪಿಸಬೇಕೆಂಬ ನನ್ನ ಸಹೋದ್ಯೋಗಿ ಶ್ರೀ ದಿನಕರ ದೇಸಾಯಿಯವರ ಸಲಹೆಯನ್ನು ನಾನು ಒಪ್ಪುತ್ತೇನೆ. ಇದು ದಕ್ಷಿಣ ಅಥವಾ ಉತ್ತರದ ಪ್ರಶ್ನೆಯಲ್ಲ. ದೇಶದ ನಾಲ್ಕು ದಿಕ್ಕುಗಳಲ್ಲೂ ಇದಾಗಬೇಕು. ಬೆಂಗಳೂರಿನಲ್ಲಿ ಈ ವಿಶ್ವವಿದ್ಯಾಲಯ ಸ್ಥಾಪಿಸಬೇಕೆಂಬುದಕ್ಕೆ ನನ್ನ ಸಂಪೂರ್ಣ ಬೆಂಬಲವಿದೆ. ದಕ್ಷಿಣದಲ್ಲಿ ಬೆಂಗಳೂರೇ ಯೋಗ್ಯವಾದ ಸ್ಥಳ. ಪ್ರಾಚ್ಯ ವಸ್ತು ಇಲಾಖೆಯ ಬಗೆಗೆ ಒಂದು ವಿಚಾರ ಹೇಳಬೇಕೆಂದರೆ, ಎರಡು ಉಪ ವೃತ್ತಗಳು ಮೈಸೂರು ರಾಜ್ಯದಲ್ಲಿವೆ. ಒಂದು ಮದರಾಸು ವೃತ್ತದ ಅಧೀನದಲ್ಲಿದ್ದರೆ ಇನ್ನೊಂದು ಔರಂಗಬಾದ್ ವೃತ್ತದ ಅಧೀನದಲ್ಲಿದೆ. ಈ ರೀತಿ ಬೇರೆ ಬೇರೆ ದೂರ ದೂರದ ವೃತ್ತಗಳಲ್ಲಿರುವ ಕಾರಣದಿಂದ, ಅವರ ನಿರ್ಲಕ್ಷ್ಯದಿಂದ ನಮ್ಮ ರಾಜ್ಯದ ಐತಿಹಾಸಿಕ ಸ್ಮಾರಕಗಳು ಶಿಥಿಲಾವಸ್ಥೆಯ ಪರಾಕಾಷ್ಠೆ ಮುಟ್ಟಿವೆ. ಇದಕ್ಕೋಸ್ಕರ ಇವುಗಳ ಮೇಲ್ವಿಚಾರಣೆಗಾಗಿ ಮೈಸೂರು ರಾಜ್ಯಕ್ಕೆ ಸೀಮಿತವಾದ ಒಂದು ವೃತ್ತ ರಚಿಸಬೇಕು. ಈ ಎರಡು ವೃತ್ತಗಳು ಒಂದೇ ಅಧಿಕಾರದ ವ್ಯಾಪ್ತಿಗೆ ಒಳಪಡಬೇಕು. ಕಾಶಿ ಹಿಂದೂ ವಿಶ್ವವಿದ್ಯಾನಿಲಯ ಮತ್ತು ಜಮಾತ್-ಎ-ಉಲ್-ಮಿಲಿಯಗೆ ಅದಕ್ಕಿಂತ ಹೆಚ್ಚು ಹಣ ನೀಡಿರುವುದು ಸರಿಯಲ್ಲ. ಎರಡರಲ್ಲೂ ಒಂದೇ ಮಟ್ಟದ ಶಿಕ್ಷಣವಿರುವಾಗ, ಈ ತಾರತಮ್ಯವಾದರೂ ಏಕೆ?

**(ಲೋಕಸಭೆ ಕಲಾಪ; ಏಪ್ರಿಲ್ 17, 1969)**

## ದುಬಾರಿಯಾದ ಭಾರತದ ಪ್ರಧಾನಿ

ಈ ಬಡದೇಶದ ಶ್ರೀಮಂತ ಪ್ರಧಾನಿಗಾಗಿ ದಿನ ಒಂದಕ್ಕೆ 25,000ರೂ. ಖರ್ಚು ಮಾಡುತ್ತಿದ್ದೇವೆ ಎಂಬ ವಿಚಾರವನ್ನು ಕೆಲ ವರ್ಷಗಳ ಹಿಂದೆ ಡಾ. ಲೋಹಿಯಾರವರು ಈ ಸದನದಲ್ಲೇ ತಿಳಿಸಿದಾಗ ಯಾರೂ ನಂಬಲಿಲ್ಲ. ಆಮೆರಿಕೆಯಲ್ಲಿ ಅಧ್ಯಕ್ಷರಿಗಾಗಿ ದಿನ ಒಂದಕ್ಕೆ ಕೇವಲ 15,000ರೂ. ಮಾತ್ರ ಖರ್ಚು ಮಾಡಲಾಗುತ್ತಿದೆ. ಬ್ರಿಟನ್‌ನಲ್ಲಿ ಪ್ರಧಾನಿಗೆ 5,000ರೂ. ಮಾತ್ರ ದಿನಕ್ಕೆ ಖರ್ಚು ಮಾಡುತ್ತಿದ್ದಾರೆ. ನಾವು ಈ ದೇಶದಲ್ಲಿ ಭ್ರಷ್ಟಾಚಾರ ನಿವಾರಣೆಗೆ ಕಾನೂನು ಮಾಡಿದ್ದೇವೆ. ಆದರೆ ಕೇವಲ ಕಾನೂನುಗಳು ಸಮಸ್ಯೆಯನ್ನು ಪರಿಹರಿಸಲಾರವು. ಜನರಿಗೆ ಅಥವಾ ಪೊಲೀಸ್ ಪೇದೆಗೆ ಭ್ರಷ್ಟಾಚಾರದ ವಿರುದ್ಧ ಉಪದೇಶ ಮಾಡುವುದರಿಂದ, ಸಮಸ್ಯೆಯನ್ನು ಪರಿಹರಿಸಲು ಸಾಧ್ಯವಿಲ್ಲ. ಕೇವಲ ಪ್ರವಚನಗಳು ಏನೂ ಮಾಡಲಾರವು. ಮೇಲ್ಮಟ್ಟದಲ್ಲಿರುವ ವ್ಯಕ್ತಿಗಳು ಸರಳ ಜೀವನ, ಉತ್ತಮ ಆಚರಣೆಗಳನ್ನು ನಡೆಸಿ ಆದರ್ಶಪ್ರಾಯರಾಗುವ ಮೂಲಕ ಮಾತ್ರ ಇದನ್ನು ಸಾಧಿಸಲು ಸಾಧ್ಯ.

**(ಲೋಕಸಭೆ ಕಲಾಪ, ನವೆಂಬರ್ 11, 1969)**

## ಇಂಗ್ಲಿಷನ್ನು ಓಡಿಸೋಣ

ಈ ದೇಶದ ಮಣ್ಣಿನಿಂದ ಇಂಗ್ಲಿಷನ್ನು ಒದ್ದೋಡಿಸಬೇಕೆಂಬ ನನ್ನ ಹಿಂದಿನ ಸಲಹೆಯನ್ನು ಪುನಃ ಪ್ರಸ್ತಾಪಿಸಿ, ಸಮರ್ಥಿಸಬಯಸುತ್ತೇನೆ. ಪ್ರಾದೇಶಿಕ ಭಾಷೆಗಳನ್ನು ಪ್ರೋತ್ಸಾಹಿಸುವುದರಿಂದ ಮಾತ್ರವೇ ಈ ದೇಶದ ಪ್ರಗತಿ ಸಾಧ್ಯ. ಯೋಜನೆಯ ಸಮರ್ಥ

ಕಾರ್ಯಾಚರಣೆಯೊಡನೆ ಶಿಕ್ಷಣಕ್ಕಾಗಿ ಮೀಸಲಿಟ್ಟ ಹಣದ ಸಂಪೂರ್ಣ ಮತ್ತು ಸರಿಯಾದ ರೀತಿ ಖರ್ಚು ಆಗಬೇಕು. ಇಷ್ಟನ್ನು ಹೇಳುತ್ತಾ ವಿಶ್ವ ವಿದ್ಯಾನಿಲಯಗಳ ಧನಸಹಾಯ ಆಯೋಗ ತಿದ್ದುಪಡಿ (1970) ವಿಧೇಯಕದಲ್ಲಿರುವ ಇತರೆ ವಿಚಾರಗಳನ್ನು ವಿರೋಧಿಸುತ್ತಾ, ವಿಶ್ವವಿದ್ಯಾ ನಿಲಯಗಳ ಧನ ಸಹಾಯ ಆಯೋಗದ ಕಾರ್ಯ ನಿರ್ವಹಣೆಯ ಬಗ್ಗೆ ನನ್ನ ಸಂಪೂರ್ಣ ಅತೃಪ್ತಿ, ಅಸಮಾಧಾನಗಳನ್ನು ವ್ಯಕ್ತಪಡಿಸಬಯಸುತ್ತೇನೆ.

**(ಲೋಕಸಭೆ ಕಲಾ, ಮೇ 15, 1970)**

### ನಕ್ಸಲೀಯರ ಚಳುವಳಿಗೆ ಕಾರಣವೇನು?

ನಕ್ಸಲೀಯರ ಚಳುವಳಿ ಏಕೆ ಪ್ರಾರಂಭ ವಾಯಿತು? ಈ ದೇಶದಲ್ಲಿ ಅದು ಏಕೆ ತಲೆಯೆತ್ತಿತು ಎಂಬುದನ್ನು ಅತ್ಯಂತ ಆಳವಾಗಿ ವಿಚಾರ ಮಾಡುವುದು ಅತಿ ಅವಶ್ಯಕವೆಂಬುದು ನನ್ನ ಭಾವನೆ. ಇದಕ್ಕೊಂದು ಉದಾಹರಣೆ ನೀಡಬಯಸುತ್ತೇನೆ. ಮಲೇರಿಯಾ ರೋಗವನ್ನು ನಿಗ್ರಹಿಸಲು ಅನೇಕ ಕ್ರಮಗಳನ್ನು ಕೈಗೊಂಡಿದ್ದರೂ ಕೂಡ, ಅವುಗಳಿಂದ ಅದು ಪರಿಹಾರವಾಗಿಲ್ಲ. ಇಲ್ಲಿ ಮೂಲಭೂತವಾಗಿ, ಮಲೇರಿಯಾಕ್ಕೆ ಕಾರಣವಾದ ಕ್ರಿಮಿಗಳನ್ನು ನಾಶಮಾಡುವುದೇ ಪರಿಹಾರಕ್ಕಿರುವ ಒಂದೇ ಮಾರ್ಗ. ವೈದ್ಯರುಗಳು ಮಲೇರಿಯಾ ರೋಗಕ್ಕೆ ಔಷಧವನ್ನು ಸೂಚಿಸಿದರೂ, ಅದು ಶಾಶ್ವತ ಪರಿಹಾರವನ್ನು ನೀಡದೆ, ರೋಗದ ವ್ಯಾಪಕತೆಗೆ ಕಾರಣವಾದಂತೆ, ಇಲ್ಲಿ ಮೂಲ ಸಮಸ್ಯೆ ಪರಿಹರಿಸದೆ, ಕೇವಲ ಮೇಲುಪಚಾರದ ಮಾತುಗಳ ಆರೈಕೆ ನಡೆದಿದೆ. ಅಲ್ಲದೆ ಕಳೆದ 23 ವರ್ಷಗಳಿಂದ ನಡೆದ ಕಾಂಗ್ರೆಸಿನ ದುರಾಡಳಿತ, ಮುಖ್ಯವಾಗಿ ನಕ್ಸಲೀಯರ ಚಟುವಟಿಕೆಗಳಿಗೆ ಮೂಲ ಕಾರಣ ವಾಗಿದೆಯೆಂಬುದನ್ನು ಮರೆಯಬಾರದು. ಮೇಲಿನ ಉದಾಹರಣೆಯಂತೆ, ನಕ್ಸಲೀಯರ ಉಪಟಳ ವ್ಯಾಪಕವಾಗದಿರಲು ಮತ್ತು ಅದನ್ನು ಬಗೆಹರಿಸಲು ಮುಖ್ಯವಾಗಿ, ಆರ್ಥಿಕ ಸಮಸ್ಯೆಯನ್ನು ಸಂಪೂರ್ಣ ವಾಗಿ ಪರಿಹರಿಸುವುದೊಂದೇ ಮಾರ್ಗ. ಇದಲ್ಲದೆ, ಕೇವಲ ತಾತ್ಕಾಲಿಕ ಉಪಶಮನಗಳಿಂದ ಸಮಸ್ಯೆ ಪರಿಹಾರವಾಗದು.

**(ಲೋಕಸಭೆ ಕಲಾಪ, ನವೆಂಬರ್ 20, 1970)**

●

---

ನೋವುಗಳನ್ನು
ಜೀರ್ಣಿಸುತ್ತಾ ಹೋದೆ
ನನ್ನೊಳಗೊಬ್ಬ
ಕವಿ ಬೆಳೆಯುತ್ತಿದ್ದ

ಸಕಲ ನೋವು-ಸಂಕಟ
ಸಾಗರ ಅಬ್ಬರಗಳು..
ಮುಗಿಯುವವು
ಒಮ್ಮೆ ''ಮೃತ್ಯು'' ದಡದಲ್ಲಿ

**- ಶೋಭಾ ಪ್ರಮೋದ್**, ರಾಯಘಡ

# ಆ ಮಗು

❑ ಎಲಿಜಬೆತ್ ಜೋರ್ಡಾನ್
ಕನ್ನಡಕ್ಕೆ: ಕೆ.ಟಿ. ಶ್ಯಾಮಸುಂದರ್

ನನಗಾಗಿದ್ದ ಆಪರೇಷನ್ ಬಹಳ ಚಿಕ್ಕದು. ಕೇವಲ ಒಂದು ಗಂಟೆಯಲ್ಲಿ ಆ ಆಪರೇಷನ್ ಮುಗಿದು ಪ್ರಜ್ಞೆ ಬಂದಿತ್ತು. ಅದರ ಗುರುತಾಗಿ ನನಗೆ ಕಾಣುತ್ತಿದ್ದುದಾದರೂ ಎಡಗಿವಿಯ ಬಳಿ ಇಟ್ಟು ಕಟ್ಟಿದ್ದ ಹತ್ತಿಯಷ್ಟೆ. ಆದರೂ ಕಿವಿಯೆಲ್ಲಾ ಗುಂಯ್‌ಗುಡುತ್ತಲೇ ಇತ್ತು.

ನಾನು ಕ್ಷೇಮವಾಗಿದ್ದೇನೆಂದು ಅರಿತ ವೈದ್ಯರು ನನ್ನನ್ನು ಒಂಟಿಯಾಗಿ ಬಿಟ್ಟು ನಿರ್ಯೋಚನೆಯಿಂದ ಹೊರಟುಬಿಟ್ಟಿದ್ದರು. ನನ್ನನ್ನು ನೋಡಿಕೊಳ್ಳುತ್ತಿದ್ದ ನರ್ಸ್ ಸಹ ಅಲ್ಲಿರಲಿಲ್ಲ. ನನ್ನೆದುರಿಗೆ ಅಲ್ಲಿದ್ದ ನನ್ನ ಸಂಗಾತಿಗಳೆಂದರೆ ಆಗ ತಾನೇ ತೊಳೆದು ಇನ್ನೂ ಮೇಜಿನ ಮೇಲೇ ಇಟ್ಟಿದ್ದ ಚಾಕು, ಕತ್ತರಿಗಳು. ಪಕ್ಕದಲ್ಲೇ ಬೆಲ್ಲಿನ ಸ್ವಿಚ್ ಇತ್ತು. ಆ ನಿರ್ಮಾನುಷ್ಯತೆ, ಏಕಾಂತತೆಗಳು ಗಂಭೀರ ಭೀಕರವಾಗಿ ಕಂಡವು. ಮಾನವ ಕರಸ್ಪರ್ಶಕ್ಕಾಗಿ ನಾನು ಹಾತೊರೆಯತೊಡಗಿದೆ. ಕಡೆಗೊಮ್ಮೆ ತಡೆಯಲಾರದೆ ಧೈರ್ಯಮಾಡಿ ಬೆಲ್ಲಿನ ಗುಂಡಿಯನ್ನೊತ್ತಿದೆ. ನರ್ಸ್ ಅದನ್ನು ಕೇಳಿ ನನ್ನ ಕಡೆ ತಿರುಗಿ ತೀಕ್ಷ್ಣ ನೋಟವೊಂದನ್ನು ಬೀರಿದಳು. ನಾನು ಬಯಸಿದ, ಮನಸ್ಸಿನ ಭಯ, ಬೇಸರಗಳನ್ನು ಹೋಗಲಾಡಿಸುವ ವಸ್ತು ಅವಳಿಂದ ದೊರೆಯದೆಂದು ಕೂಡಲೇ ನನಗೆ ಅರಿವಾಯಿತು.

''ಏನು ಬೇಕು?'' ಎಂದವಳು ಕೇಳಿದಳು.

''ಏನೂ ಇಲ್ಲ'' ಎಂದೆ ನಾನು ದೈನ್ಯದಿಂದ.

''ಹಾಗಾದರೆ ಕರೆದುದೇಕೆ?'' ಎನ್ನುವಂತೆ ಹುಬ್ಬುಗಂಟಿಕ್ಕಿಕೊಂಡು ನನ್ನ ಕಡೆ ನೋಡಿ ಹತ್ತಿರ ಬಂದಳು. ಸುಕ್ಕಾಗಿದ್ದ ಬೆಡ್‌ಷೀಟನ್ನು ಸರಿಮಾಡಿ ನಾಡಿಯ ಬಡಿತವನ್ನು ಎಣಿಸಿದಳು. ಆಮೇಲೆ ಬಾಯಲ್ಲಿ ಥರ್ಮಾಮೀಟರ್ ಇಟ್ಟು ನೋಡಿ, ''ಎಲ್ಲವೂ ನಾರ್ಮಲ್'' ಎಂದು ಹೇಳಿ ಹೊರಕ್ಕೆ ಹೊರಟಳು. ಹೊರಡುತ್ತಿದ್ದ ಅವಳನ್ನು ನಾನೇ ತಡೆದು,

''ನನ್ನನ್ನು ನೋಡಿಕೊಳ್ಳಲು ಪ್ರತ್ಯೇಕವಾಗಿ ಯಾರೂ ಇರುವುದಿಲ್ಲವೇ?'' ಎಂದು ಕೇಳಿದೆ.

''ಯಾರೂ ಬೇಕಿಲ್ಲ. ನೀವು ಇನ್ನು 3-4 ದಿನಗಳಲ್ಲೇ ರಿಲೀವ್ ಆಗುತ್ತೀರಿ. ನಿಮ್ಮ ಕೇಸ್ ಸೀರಿಯಸ್ ಅಲ್ಲ... ಆದರೆ ನೀವು ಏಕಾಂಗಿಯಾಗಿರುವುದೇ ನಿಮ್ಮ ಸಂಕಟಕ್ಕೆ ಕಾರಣವೆಂದು ಕಾಣುತ್ತದೆ.''

''ಹಾಗೆಯೇ ಇರಬಹುದು. ನನ್ನ ಸಂಕಟಕ್ಕೆ, ವೇದನೆಗೆ ನೀವೂ ಡಾಕ್ಟರುಗಳೂ ಏನೂ ಮಾಡಲಾರಿರೆಂದು ನಾನು ಬಲ್ಲೆ.''

ಅವಳು ಒಂದು ಕ್ಷಣ ನನ್ನ ಮುಖವನ್ನೇ ದಿಟ್ಟಿಸಿ ನೋಡಿದಳು. ನಂತರ ಹತ್ತಿರ ಬಂದು ಕಿವಿಯ ಹಿಂದೆ ಮೂಳೆಯನ್ನೊತ್ತಿ ''ನೋವಾಗುತ್ತದೆಯೇ?'' ಎಂದು ಕೇಳಿದಳು.

''ಇನ್ನೂ ಆಗುತ್ತಿಲ್ಲ. ಡಾಕ್ಟರು ಎರಡು ಬಾರಿ ಕೇಳಿಯಾಯಿತು. ಈಗ ನೀವು ಕೇಳಿದಿರಿ. ಅದನ್ನೇ ಚಿಂತಿಸುತ್ತ ಇದ್ದರೆ ಇನ್ನು ಸ್ವಲ್ಪ ಹೊತ್ತಿನಲ್ಲೇ ನೋವು ಹುಟ್ಟುವುದು ಖಂಡಿತ'' ಎಂದು ನಾನೆಂದೆ.

''ನಿಮಗೆಲ್ಲೋ ಹುಚ್ಚು. ಅದಿರಲಿ ನಿಮಗೇನಾದರೂ ತಿಂಡಿ ಬೇಕೇ? ಏನು ಕಳುಹಿಸಲಿ?''

ಆದರೆ ನನ್ನ ಮನಸ್ಸು ಎಲ್ಲೋ ಇತ್ತು- ''ರೋಗ ಹೆಚ್ಚಾಗುವುದಿಲ್ಲವಷ್ಟೇ? ನನ್ನ ಊರಿಗೆ ಕಾಗದ ಬರೆದಿರಾ? ಕಡೆಯ ಗಳಿಗೆಯಲ್ಲೂ ಬಂಧುಗಳನ್ನು ನೋಡದಂತೆ ಮಾಡಬೇಡಿ'' ಎಂದು ದೈನ್ಯದಿಂದ ಕೇಳಿದೆ.

''ಬಹಳ ಹಚ್ಚಿಕೊಂಡು ಬಿಟ್ಟಿದ್ದಾರೆ. ಅದರ ಕಡೆ ಗಮನ ತಪ್ಪಿಸಬೇಕು'' ಎಂದು ತನಗೆ ತಾನೇ ಎಂದುಕೊಂಡು, ''ನಿಮಗೆ ಈಗ ಸಮಾಧಾನ ಬೇಕು... ಇರಿ. ಈಗ ಕಳುಹಿಸುತ್ತೇನೆ'' ಎಂದು ಹೇಳಿ ಹೊರಟು ಹೋದಳು.

ನನಗೆ ಸಮಾಧಾನ ಬೇಕೆಂದು ಅವಳು ಹೇಳಿದುದೇನೋ ನಿಜ. ಆದರೆ ಅದೇನು ಬಟ್ಟೆಯೇ, ಹಣ್ಣೇ, ಹೂವೇ ಅದನ್ನು ಕಳುಹಿಸಲು? ಅದೇನಾದರೂ ಇರಲಿ, 'ಬೇಗಲಾದರೂ ಕಳುಹಿಸ ಬಾರದೇ?' ಎಂದುಕೊಂಡೆ. ಕಿವಿಯ ಹಿಂದೆ ನೋವು ಹೆಚ್ಚಾಗುತ್ತಿತ್ತು. ನಾನು ಸಾಯುವೆನೆಂದುಕೊಂಡೆ. ನನ್ನ ಸಾವಿನ ಚಿತ್ರ ಕಣ್ಣ ಮುಂದೆ ನಿಂತಿತು. ಸತ್ತ ಮೇಲೆ ನನ್ನ ಶವವನ್ನು ನೋಡಲು ಬರುವ ಬಂಧು ಮಿತ್ರರದೆಷ್ಟು ಜನ? ಆಸ್ಪತ್ರೆಯಿಂದ ಮನೆಯವರೆಗೂ ಕಾರುಗಳು ಸಾಲಾಗಿ ನಿಂತಿವೆ. ಇದ್ದಕ್ಕಿದ್ದಂತೆಯೇ ಎಚ್ಚರವಾಯಿತು. ಕನಸು ಒಡೆಯಿತು. ಆದರೂ ಮನಸ್ಸಿಗೆ ಬೇರೇನೂ ಹೊಳೆಯಲಿಲ್ಲ. ನನ್ನ ಶವದ ಪೆಟ್ಟಿಗೆಯನ್ನು ಹೊರುವವರಾರೆಂದು ಯೋಚಿಸುತ್ತಿದ್ದೆ.



ಅಷ್ಟರಲ್ಲಿ ಬಾಗಿಲ ಬಳಿ ನಿಂತು 5-7 ವರ್ಷದ ಒಬ್ಬ ಹುಡುಗ, ''ಬರಲೇ?'' ಎಂದು ಕೇಳಿದ. ಗುಂಗುರು ಕೂದಲಿನ, ಸೋಗೆಗಣ್ಣುಗಳ, ಆ ಹುಡುಗನನ್ನು ನೋಡುತ್ತಲೇ ನನಗೊಂದು ರೀತಿಯ ಸಮಾಧಾನವಾಯಿತು. ಹಲ್ಲುಗಳೆಲ್ಲಾ ಹೊಳೆಯುವಂತೆ ಮುಗುಳ್ನಗುತ್ತಿದ್ದ ಅವನ ಮುಖವನ್ನು ನೋಡುತ್ತಲೇ ಆನಂದವಾಯಿತು.

''ಬಾ ಮಗೂ, ಹಾಸಿಗೆಯ ಮೇಲೆ ಕುಳಿತುಕೋ ಬಾ'' ಎಂದು ನನಗರಿವಿಲ್ಲದಂತೆಯೇ ಅವನನ್ನು ಕರೆದೆ. ಅದಕ್ಕಾಗಿಯೇ ಕಾದಿದ್ದ ಅವನು ಬಂದು ನಗುತ್ತಾ ನನ್ನ ಪಕ್ಕದಲ್ಲಿ ಕುಳಿತುಕೊಂಡು,

''ಈಗ ನೋವು ವಾಸಿಯೇ?'' ಎಂದು ಕೇಳಿದನು. ನಿಜಕ್ಕೂ ಅವನನ್ನು ನೋಡುತ್ತಲೇ ನನ್ನ ನೋವೆಲ್ಲಾ ಮಾಯವಾಗಿತ್ತು.

''ನರ್ಸ್ ಸ್ಮಿತ್ ನನ್ನನ್ನು ಕಳುಹಿಸಿದಳು. ನಾನು ಬಂದೆ'' ಎಂದು ತಾನು ಬಂದುದಕ್ಕೆ ಕಾರಣವನ್ನು ವಿವರಿಸಿದನು. ಅವಳು ಹೇಳಿದ ಸಮಾಧಾನ ಈ ಮಗುವೇ ಎಂದು ನನಗೆ ಆಗ ತಿಳಿಯಿತು. ಆಸ್ಪತ್ರೆಯಲ್ಲಿ ತಾನು ಮಾಡುತ್ತಿದ್ದ ಕೆಲಸವನ್ನು ವಿವರಿಸಿದನು-

''ನಾನಿರುವುದು ಯಾವಾಗಲೂ ಆಸ್ಪತ್ರೆಯಲ್ಲೇ. ನನಗೆ ಒಂಟಿಯಾಗಿರುವೆನೆಂದೆನ್ನಿಸುವುದೇ ಇಲ್ಲ. ಆದರೂ ಇಲ್ಲಿಗೆ ಬರುವ ಕೆಲವರಿಗೆ ಹಾಗೆನ್ನಿಸುತ್ತದೆ. ಆಗ ನಾನು ಅವರಲ್ಲಿಗೆ ಹೋಗಿ ಮಾತನಾಡುತ್ತೇನೆ. ಆಗ ಅವರು ಹರ್ಷಿಸುತ್ತಾರೆ. ಮಕ್ಕಳಂತೂ ಬಹಳ ಅಳುತ್ತಾರೆ. ಅವರ ಕಣ್ಣುಗಳಿಗೆ ಬ್ಯಾಂಡೇಜ್ ಕಟ್ಟಿದಾಗ ಎಲ್ಲವೂ ಕತ್ತಲೆಯಾಗಿ ಕಾಣುತ್ತದೆ. ಕತ್ತಲೆಯಲ್ಲಿ ಎಲ್ಲವೂ ಭೀಕರವಾಗಿ ಕಾಣುತ್ತದೆ. ಹುಲಿ, ಸಿಂಹಗಳು, ಗುಮ್ಮಯ್ಯಗಳು ಬಂದಂತೆ ಕಾಣುತ್ತದೆ. ಆಗ ನಾನು ಹೋಗಿ ಅವರ ಕೈ ಹಿಡಿದು ಸಮಾಧಾನ ಮಾಡುತ್ತೇನೆ. ಆಗ ಅವರಿಗೆ

ಜಾತ್ರೆಗಳು, ಕ್ರಿಸ್ಮಸ್ ಹಬ್ಬ, ನೃತ್ಯ ಕೂಟಗಳು ಕಾಣತೊಡಗುತ್ತವೆ. ಅವರ ಭಯವನ್ನು ಮರೆತು ಆನಂದಿಸುತ್ತಾರೆ.''

ಅವನ ಮುಗ್ಧ ಮಾತುಗಳು ನನಗೆ ಆಹ್ಲಾದವನ್ನುಂಟುಮಾಡಿದವು. ಮೆಚ್ಚಿಕೆಯನ್ನು ವ್ಯಕ್ತಪಡಿಸಿದೆ. ಅವನೂ ಮುಗುಳ್ನಕ್ಕನು. ಬರುಬರುತ್ತಾ ನಾವಿಬ್ಬರೂ ಆಪ್ತರಾದೆವು. ಪಕ್ಕದ ಕೋಣೆಯಲ್ಲಿದ್ದ ಹುಡುಗನೊಬ್ಬನ ವಿಷಯವನ್ನು ಅವನೇ ಹೇಳತೊಡಗಿದ-

''ಅವನ ಹೆಸರು ವಿಲ್ಲೀ ಮ್ಯಾಕ್ಸ್‌ವೆಲ್. ಅವನಿಗೆ ಅದೆಂಥದೋ ರೋಗವಂತೆ; ಡಾಕ್ಟರು ಹೇಳಿದರು. ನನಗೆ ಹೇಳಲು ಬರುವುದಿಲ್ಲ. ಅವನಿಗೆ ಬಹಳ ನೋವಾಗುತ್ತದಂತೆ. ಈಗ ತಾನೇ ಅವನ ಬಳಿಗೆ ಅವನ ತಾಯಿ ಬಂದರು. ನಾನು ಎದ್ದು ನಿನ್ನ ಬಳಿಗೆ ಬಂದೆ. ಈಗ ಅವನ ಬಳಿ ಒಂದು ಗ್ರಾಮಾಫೋನ್ ಸಹ ಇಟ್ಟಿದ್ದಾರೆ. ಆದ್ದರಿಂದ ಅವನಿಗೆ ನಾನಿರದಿದ್ದರೂ ಪರವಾಯಿಲ್ಲ.''

ತನಗೆ ಆಸ್ಪತ್ರೆಯ ವಿಚಾರವಾಗಿ ಗೊತ್ತಿದ್ದುದನ್ನೆಲ್ಲಾ ಹೇಳಿ ನಿಲ್ಲಿಸಿದ. ಮತ್ತೆ ಕೋಣೆಯಲ್ಲಿ ಮೌನವಾವರಿಸಿತು. ನನ್ನ ಕಿವಿಯ ಬಳಿ ಮತ್ತೆ ನೋವು ಆರಂಭವಾಯಿತು. ಆ ಮಗುವಿಗೆ- ನನ್ನ ನೋವನ್ನು ಮರೆಸಿ ಸಮಾಧಾನ ನೀಡಿದ್ದ ಆ ಮಗುವಿಗೆ ಕೊಡಲು ಆಗ ನನ್ನ ಬಳಿ ಏನೂ ಇರಲಿಲ್ಲ. ನನ್ನ ಬಳಿ ಆಗ ಹೂಗಳು ಇರಲಿಲ್ಲ. ಬೊಂಬೆಯ ಪುಸ್ತಕಗಳಿರಲಿಲ್ಲ. ಹೋಗಲಿ, ಚಾಕಲೇಟೂ ಇರಲಿಲ್ಲ. ಕಡೆಗೆ ನಾನೇ ಮೌನವನ್ನು ಮುರಿಯಬೇಕಾಯಿತು.

''ಮಗೂ, ನಿನಗೆ ಕಥೆ ಕೇಳಲು ಆಸೆಯೋ?''

''ಹಾಂ! ಕಥೆಗಳೇ?'' ಎಂದ ಜಿಗಿದೆದ್ದು.

''ನಿನಗೆ ಕಥೆಗಳು ಗೊತ್ತಿವೆಯೇ? ಹಾಗಾದರೆ ಹೇಳುತ್ತೀಯಾ?''

(ಈ ವೇಳೆಗಾಗಲೇ ನಮ್ಮಿಬ್ಬರ ನಡುವಿನ ಸಂಭಾಷಣೆ ಏಕವಚನದಲ್ಲೇ ನಡೆಯತೊಡಗಿತ್ತು).

''ಓಹೋ ನನಗೆ ತುಂಬಾ ಕಥೆ ಗೊತ್ತು. ನನಗೆ ಗೊತ್ತಿರುವ ಕಥೆಗಳನ್ನೆಲ್ಲಾ ನಾನು ದಿನಾ ಒಂದೊಂದು ಹೇಳುತ್ತಿದ್ದರೆ, ಅವು ಮುಗಿಯುವ ವೇಳೆಗೆ ನೀನು ಗಡ್ಡ ಮೀಸೆ ಬಂದ ಮನುಷ್ಯನಾಗಿ ಬಿಟ್ಟಿರುತ್ತಿ'' ಎಂದು ನಕ್ಕನು.

''ಈಗ ತಮಾಷೆ ಬೇಡ. ನಿನಗೆ ಕಥೆ ಗೊತ್ತಿದ್ದರೆ ಈಗಲೇ ಒಂದು ಕಥೆ ಬೇಗನೆ ಹೇಳಿಬಿಡು. ರಾತ್ರಿಯ ಊಟಕ್ಕೆ ಹೊತ್ತಾಗುತ್ತಿದೆ. ಬೇಗನೆ ಕಥೆಯನ್ನು ಹೇಳಿ ಮುಗಿಸು.''

ನಾನು ಅಸುರ ಮರ್ದನ ಜಾಕ್ ಹುಡುಗನ ಕಥೆಯನ್ನು ಹೇಳತೊಡಗಿದೆ. ಅತಿ ಉತ್ಸುಕತೆಯಿಂದ ಅವನು ಕೇಳುತ್ತ ಕುಳಿತನು. ಜಾಕ್ ರಾಕ್ಷಸರ ಕೈಲಿ ಸಿಕ್ಕಿಬಿದ್ದಾಗಲೆಲ್ಲಾ ಅವನ ಉಸಿರಾಟದ ವೇಗ ಹೆಚ್ಚುತ್ತಿತ್ತು. ಬಿಡಿಸಿಕೊಂಡಾಗ ಉದ್ವೇಗ ಮಾಯವಾಗುತ್ತಿತ್ತು. ರಾಕ್ಷಸರನ್ನು ಕೊಂದಾಗ ಮುಖದಲ್ಲಿ ಮಂದಹಾಸ ಮಿನುಗುತ್ತಿತ್ತು.

ಕಥೆ ಮುಗಿಯುವ ವೇಳೆಗೆ ಸಾಕಷ್ಟು ಹೊತ್ತಾಗಿತ್ತು.

''ನಿನ್ನ ಕಥೆಗೆ ಬಹುಮಾನ ಏನು ಗೊತ್ತೇ?''

''ಗೊತ್ತಿಲ್ಲ''.

''ಇಗೋ ಈ ಗುಲಾಬಿ ಹೂ ನಿನಗೆ'' ಎಂದು ತಾನು ಅಂಗಿಗೆ ಸಿಕ್ಕಿಸಿಕೊಂಡಿದ್ದ ಹೂವನ್ನು ಪಿನ್ನಿನ ಸಹಿತ ತೆಗೆದು ನಾನು ಬೇಡವೆಂದರೂ ಕೇಳದೆ ನನ್ನ ಅಂಗಿಗೆ ಸಿಕ್ಕಿಸಿ,

''ನೀನು ಬಹಳ ಒಳ್ಳೆಯವನು. ಇನ್ನೊಂದೇ ಒಂದು ಪುಟ್ಟ ಕಥೆ ಹೇಳುತ್ತೀಯಾ?'' ಎಂದು ಆಸೆಯಿಂದ ಕೇಳಿದನು.

ಅವನ ಬೇಡಿಕೆಯನ್ನು ನಿರಾಕರಿಸಲು ನನ್ನಿಂದ ಸಾಧ್ಯವೇ ಇರಲಿಲ್ಲ. ಒಂದಲ್ಲ, ಎರಡು ಕಥೆಗಳನ್ನು ಹೇಳಿದೆ. ಮೂರನೆಯ ಕಥೆಯಲ್ಲಿ ರಾಕ್ಷಸನ ಕೈಗೆ ಸಿಕ್ಕಿಬಿದ್ದ ರಾಜಕುಮಾರಿಯು ತನ್ನ ದುರ್ದೈವವನ್ನು ಹಳಿದುಕೊಳ್ಳುತ್ತಾ ಅಳುತ್ತಿರುವಾಗ ನರ್ಸ್ ಸ್ಮಿತ್ ಬಂದಳು. ನನ್ನನ್ನೂ ಹುಡುಗನನ್ನೂ ನೋಡಿ ನಕ್ಕಳು. ಹತ್ತಿರ ಬಂದು ನೋಡಿ,

''ಓ! ಹ್ಯಾರಿ ನಿದ್ರೆ ಹೋಗಿದ್ದಾನೆ! ಅವನಿಂದ ನಿಮಗೆ ಬಹಳ ಸಮಾಧಾನ ದೊರೆತಿರಬೇಕಲ್ಲವೇ?'' ಎಂದು ಕೇಳಿ ಹುಡುಗನನ್ನೆಬ್ಬಿಸುತ್ತಾ,

''ಹ್ಯಾರೀ, ಏಳು. ನಿನ್ನ ಹೊಸ ಗೆಳೆಯರಿಗೆ ನಮಸ್ಕಾರ ಹೇಳಿ ಬಾ. ಊಟಕ್ಕೆ ಹೊತ್ತಾಯಿತು, ಹೋಗೋಣ'' ಎಂದಳು.

ಹ್ಯಾರಿ ನಿದ್ರೆಯಿಂದ ಅರ್ಧ ಎಚ್ಚತ್ತು,

''ಥ್ಯಾಂಕ್ಸ್. ನಿನ್ನ ಕಥೆ ಬಹಳ ಚೆನ್ನಾಗಿತ್ತು. ನಾಳೆ ಮತ್ತೆ ಬರುವೆ. ಗುಡ್‌ನೈಟ್'' ಎಂದು ಹೇಳಿ ಸ್ಮಿತ್‌ಳ ಹಿಂದೆ ಹೊರಟುಹೋದನು.

ಮಿಸ್ ಸ್ಮಿತ್ ಸ್ವಲ್ಪ ಹೊತ್ತಿನಲ್ಲೇ ಪುನಃ ಬಂದು, ನನ್ನ ಶರೀರ ಸ್ಥಿತಿಯನ್ನು ಪರೀಕ್ಷಿಸತೊಡಗಿದಳು. ಹಾಗೇ ಪರೀಕ್ಷಿಸುತ್ತಾ ಹ್ಯಾರಿಯ ವಿಷಯವನ್ನು ಹೇಳತೊಡಗಿದಳು. ತಬ್ಬಲಿಯಾದ ಹ್ಯಾರಿ ರೋಗಿಯಾಗಿ ಅಲ್ಲಿಗೆ ಬಂದು ಮೂರು ವರ್ಷಗಳಾಗಿತ್ತಂತೆ. ಅವನಿಗೆ ಅದೆಂತದೋ ಭಯಂಕರ ರೋಗವಿದೆಯಂತೆ. ಆದ್ದರಿಂದ ಅವನು ಆಸ್ಪತ್ರೆಯಲ್ಲೇ ಇರುವುದು ಅವಶ್ಯವಾಯಿತು. ಅಲ್ಲಿನ ವೈದ್ಯರ ಮತ್ತು ಇತರರ ಮೆಚ್ಚಿಕೆಯನ್ನು ಗಳಿಸಿದ ಅವನನ್ನು ಆಸ್ಪತ್ರೆಯಲ್ಲೇ ಇಟ್ಟುಕೊಳ್ಳಲು ಎಲ್ಲರೂ ಇಚ್ಛಿಸಿದರು. ಮೊದಲೇ ಬಡವರಾಗಿದ್ದ ಅವನ ಚಿಕ್ಕಪ್ಪ, ಚಿಕ್ಕಮ್ಮನವರೂ ಈ ಏರ್ಪಾಡಿಗೆ ಒಪ್ಪಿದರು. ಅಂದಿನಿಂದ ಅವನು ಎಲ್ಲರ ಕಣ್ಮಣಿಯಾಗಿ ಆಸ್ಪತ್ರೆಯಲ್ಲೇ ಬೆಳೆದು ಬಂದಿದ್ದನು. ಅವನ ಮುಗ್ಧವಾಣಿ ಎಲ್ಲರನ್ನೂ ಮರುಳು ಮಾಡಿತ್ತು. ಅಲ್ಲಿಗೆ ಬಂದ ರೋಗಿಗಳೆಲ್ಲರಿಗೂ ಅವನು ಅಚ್ಚುಮೆಚ್ಚಾಗಿದ್ದನು.

''ಅವನು ನಮ್ಮೆಲ್ಲರ ಜೀವನದ ಬೆಳಕಾಗಿದ್ದಾನೆ. ನಮ್ಮ ಈ ಆಸ್ಪತ್ರೆಯ ಜ್ಯೋತಿಯಾಗಿದ್ದಾನೆ'' ಎಂದು ಉತ್ಸಾಹದಿಂದ ಹೇಳಿ, ಕಡೆಗೆ ನಿಟ್ಟುಸಿರುಬಿಟ್ಟು, ''ಆದರೂ ಅವನನ್ನು ಉಳಿಸುವುದು ನಮ್ಮಿಂದ ಸಾಧ್ಯವಿಲ್ಲ'' ಎಂದಳು ಮಿಸ್ ಸ್ಮಿತ್.

''ಹಾಂ! ಉಳಿಸುವುದು ಸಾಧ್ಯವಿಲ್ಲವೇ?''

''ಹುಟ್ಟುತ್ತಲೇ ಸಾವನ್ನೂ ಅವನು ರೋಗದ ರೂಪದಲ್ಲಿ ಕರೆ ತಂದಿದ್ದಾನೆ. ನಾವೇನೂ ಮಾಡುವಂತೆಯೇ ಇಲ್ಲ. ನಮ್ಮೆಲ್ಲರ ಕಣ್ಮಣಿಯಾದ ಅವನ ಕೋಣೆಯಲ್ಲಿ ಆಟದ ಸಾಮಾನುಗಳು ತುಂಬಿವೆ. ಬಟ್ಟೆ ಬರೆಗಳು ಬೇಕಾದಷ್ಟಿವೆ. ಚಿತ್ರದ ಪುಸ್ತಕಗಳು ಬೇಕಾದಷ್ಟಿವೆ. ಅವನಿಗಾಗಿ ನಾವೆಷ್ಟು ತಂದರೂ, ನಾವೇನು ಮಾಡಿದರೂ ಅವನು ಉಳಿಯಲಾರ. ಇನ್ನು ಕೆಲವು ತಿಂಗಳು ಅಷ್ಟೇ''- ಅವಳ ಕಣ್ಣಿನಿಂದ ಎರಡು ಹನಿ ಉದುರಿತು.

''ಭಯಗೊಂಡ ಮಕ್ಕಳನ್ನು ಸಮಾಧಾನ ಮಾಡುವುದರಲ್ಲಿ ಅವನಿಗಿರುವ ಸಾಮರ್ಥ್ಯ ನಮಗಾರಿಗೂ ಇಲ್ಲ. ಅವನನ್ನು ನೀವಿನ್ನೂ ಪೂರ್ತಿ ಕಂಡಿಲ್ಲ. ಆದರೆ ಕಾಣುವಿರಿ'' ಎಂದು ಹೇಳಿ ಹೊದಿಕೆಯನ್ನು ಸರಿಪಡಿಸಿ ಹೊರಟುಹೋದಳು.

ಮಾರನೆಯ ದಿನ ಬೆಳಗ್ಗೆ ನಾನು ತಿಂಡಿ ಮುಗಿಸುವ ವೇಳೆಗೆ ಸರಿಯಾಗಿ ಅವನು ಹಾಜರಿದ್ದನು. ಈ ಬಾರಿ ''ಒಳಕ್ಕೆ ಬರಲೇ?'' ಎಂದೇನೂ ಅವನು ಕೇಳಲಿಲ್ಲ. ನೇರಳೆ ಬಣ್ಣದ ಸೂಟ್ ಧರಿಸಿ, ಹಿಂದಿನ ಸಲಿಗೆಯನ್ನು ಮರೆತವನಂತೆ ನಟಿಸಿ ಗಾಂಭೀರ್ಯದಿಂದ ಹತ್ತಿರ ಬಂದನು. ಒಂದು ಕ್ಷಣ ನನ್ನ ಮುಖ ನೋಡಿ, ಜೇಬಿನಿಂದ ಆಟದ ಗಡಿಯಾರವನ್ನು ತೆಗೆದು, ಎಡಗೈಯಲ್ಲಿ ಹಿಡಿದು, ನಾಡಿಯ ಬಡಿತವನ್ನೆಣಿಸುವವನಂತೆ ಬಲಗೈಯಿಂದ ನನ್ನ ಮಣಿಕಟ್ಟನ್ನು ಹಿಡಿದು ಕೊಂಡನು. ಸ್ವಲ್ಪ ಹೊತ್ತು ಗಡಿಯಾರವನ್ನು ನೋಡುತ್ತಿದ್ದು, ಆ ಮೇಲೆ ಅದನ್ನು ಜೇಬಿಗೆ ಹಾಕಿ ಡಾಕ್ಟರರ ಧ್ವನಿಯನ್ನು ಅನುಕರಿಸಿ,

''ಏನೂ ಗಾಬರಿಗೆ ಕಾರಣವಿಲ್ಲರೀ, ಬೇಗ ವಾಸಿಯಾಗಿ ಬಿಡುತ್ತೆ'' ಎಂದು ಹೇಳಿ ತನ್ನ ತಮಾಷೆಯನ್ನು ತಾನೇ ತಡೆಯಲಾರದೆ ಗಟ್ಟಿಯಾಗಿ ನಕ್ಕನು. ಆಗ ಕೆನ್ನೆಯಲ್ಲಿ ಗುಳಿಬಿದ್ದು ಮುಖ



ಕಂಗೊಳಿಸಿತು.

ನನಗೂ ನಗು ಬಂತು. ನಗುವುದರಲ್ಲಿದ್ದೆ. ಅಷ್ಟರಲ್ಲಿ ಒಳಕ್ಕೆ ಬಂದ ಮಿಸ್ ಸ್ಮಿತ್ ನಗಬೇಡವೆಂದು ಸನ್ನೆಯಿಂದ ತಿಳಿಸಿ, ಹ್ಯಾರಿಯು ಆಸ್ಪತ್ರೆಯಲ್ಲಿದ್ದ ಎಲ್ಲರನ್ನೂ ಚೆನ್ನಾಗಿ ಅನುಕರಿಸಬಲ್ಲನೆಂದು ಮೆಚ್ಚಿಕೆಯಿಂದ ಹೇಳಿದಳು.

ಆ ಮೇಲೆ ಹ್ಯಾರಿ, ಮೇಜಿನ ಮೇಲೆ ಹೂದಾನಿಯಲ್ಲಿಟ್ಟಿದ್ದ ಗುಲಾಬಿ ಹೂಗಳನ್ನು ನೋಡಿ,

''ನಾನು ನಿಮಗೆ ಗುಲಾಬಿ ಹೂ ಕೊಡಬೇಕೆಂದಿದ್ದೆ. ಆದರೆ ನಿನ್ನ ಬಳಿಯೇ ತುಂಬಾ ಇದೆ'' ಎಂದು ಹೇಳಿ ಹೂಗಳ ಬಳಿ ಹೋಗಿ ಹತ್ತಿರದಿಂದ ಪರೀಕ್ಷೆ ಮಾಡತೊಡಗಿದನು. ಬಿಳಿ ಗುಲಾಬಿಗಳ ನಡುವೆ ಅವನ ಕೆಂಗುಲಾಬಿ ವರ್ಣದ ನಗುಮುಖ ರಂಜಿಸಿತು.

''ಎಲ್ಲಿಯ ತಾಯಿಯೂ ಗುಲಾಬಿ ಹೂ ತಂದಿದ್ದಾಳೆ. ಅಚ್ಚ ಹಳದಿ ಬಣ್ಣ. ಆ ಕಡೆ ಇರುವ ಮಿಸೆಸ್‌ಗ್ರೇ ಬಳಿ ಕೆಂಪು ಗುಲಾಬಿ ಇದೆ. ನಿನ್ನ ಹತ್ತಿರ ಬಿಳಿ ಗುಲಾಬಿ ಇದೆ. ಒಬ್ಬೊಬ್ಬರ ಹತ್ತಿರ ಒಂದೊಂದು ಬಣ್ಣ!''.

''ನನಗೆ ಬಿಳಿ ಗುಲಾಬಿ ಎಂದರೆ ಬಹಳ ಇಷ್ಟ. ಇವು ಇಲ್ಲಿ ಕುಂಡಗಳಲ್ಲಿ ಬೆಳೆದುವು. ಹಳ್ಳಿಗಾಡಿನಲ್ಲಿ ಬೆಳೆದ ಗಿಡಗಳ ಹೂಗಳಾದರೆ ನನಗೆ ಇನ್ನೂ ಇಷ್ಟ. ಅವು ಇವಕ್ಕಿಂತಲೂ ಸುವಾಸನೆಯಾಗಿರುತ್ತವೆ.''

''ಹಳ್ಳಿಗಾಡು ಎಂದರೆ?''

ನಾನು ಅಪ್ರತಿಭನಾದೆ. ನಗರದಲ್ಲೇ ಬೆಳೆದ ಹುಡುಗನಿಗೆ ಹಳ್ಳಿಯ ಕಲ್ಪನೆಯನ್ನುಂಟು ಮಾಡುವುದಾದರೂ ಹೇಗೆ? ಅಂತೂ ಹಳ್ಳಿಯೆಂದರೇನೆಂದು ತಿಳಿಸಿ ನಮ್ಮ ಹಳ್ಳಿಯ ಬಳಿ ಇದ್ದ, ನಾನು ಕಂಡಿದ್ದ ಹೂವಿನ ತೋಟವನ್ನು ವರ್ಣಿಸಿದೆ. ನನ್ನ ಮಾತು ಮುಗಿದ ಮೇಲೆ ಆಸ್ಪತ್ರೆಯಲ್ಲಿದ್ದ ಡಾಕ್ಟರುಗಳೆಲ್ಲರ ವಿಚಾರವನ್ನೂ ಅವನು ಹೇಳಿದನು. ಆಸ್ಪತ್ರೆಯ ಸುತ್ತಲಿನ ಹೂತೋಟದಲ್ಲಿ ಸುತ್ತಲು ತನಗೆ ತುಂಬಾ ಆಸೆಯೆಂದೂ ಹೇಳಿದನು. ಆದರೆ ಯಾವಾಗಲಾದರೂ ಸರಿ, ಹೆದರಿದ ಮಕ್ಕಳನ್ನು ಸಮಾಧಾನ ಮಾಡಲು ಅವನು ಸಿದ್ಧ. ಬೆಳಗ್ಗೆ ಒಂದು ಬಾರಿ, ಸಂಜೆ ಒಂದು ಬಾರಿಯಾದರೂ ಬರ ಹೇಳಲಿ, ಇಲ್ಲದಿರಲಿ, ವಾರ್ಡುಗಳನ್ನೆಲ್ಲಾ ಒಂದು ಬಾರಿ ಸುತ್ತಿ ಬರುತ್ತಿದ್ದನು. ಒಂದೊಂದು ಹಾಸಿಗೆಯ ಬಳಿಯೂ ನಿಂತು ವಿಚಾರಿಸಿಕೊಂಡು, ನಗುತ್ತಾ, ನಗಿಸುತ್ತಾ, ಮಕ್ಕಳು, ಹಿರಿಯರೆಲ್ಲರಿಗೂ ಸಂತೋಷವನ್ನುಂಟುಮಾಡಿ ಮುಂದುವರೆಯುತ್ತಿದ್ದನು. 'ಇದೆಂತಹ ವಿಚಿತ್ರ ಜೀವನ' ಎಂದು ಮೊದಲು ನನಗೆನ್ನಿಸಿದರೂ, ಅದರಲ್ಲೂ ಆನಂದ, ಸಂತೃಪ್ತಿಗಳಿಗೆ ಕೊರತೆ ಇಲ್ಲವೆಂದೂ ಎನ್ನಿಸಿತು.

ತನ್ನ ಕಥೆಯನ್ನೆಲ್ಲಾ ಹೇಳಿದ ಮೇಲೆ ಇದ್ದಕ್ಕಿದ್ದಂತೆ,

''ನಾನೊಂದು ದಿನವೂ ದೋಣಿಯಲ್ಲಿ ಕುಳಿತೇ ಇಲ್ಲ. ಕ್ವ್ಯಾರಿಮಮ್ ನೋಡಿಲ್ಲ. ಅಂತೂ ಒಂದು ದಿನ ನೋಡಿಯೇ ನೋಡುತ್ತೇನೆ'', ಎಂದನು.

''ಕ್ವಾರಿಮಮ್! ಹಾಗೆಂದರೆ?''

''ಗೊತ್ತಿಲ್ಲವೇ? ಮೀನುಗಳನ್ನಿಟ್ಟಿರುತ್ತಾರೆ ಅಲ್ಲಿ. ದೊಡ್ಡ ದೊಡ್ಡ ಗಾಜಿನ ಬಟ್ಟಲುಗಳಲ್ಲಿ ಬಣ್ಣ ಬಣ್ಣದ ಮೀನುಗಳು ಈಜುತ್ತಿರುತ್ತವೆ. ನಿನಗೆ ಗೊತ್ತಿಲ್ಲವೇ?''

''ಓ, ಅಕ್ವೇರಿಯಮ್ಮೇ? ನನ್ನ ಜೊತೆ ಬರುವುದಾದರೆ ನಿನ್ನನ್ನು ದೋಣಿಯಲ್ಲೂ ಕರೆದುಕೊಂಡು ಹೋಗುತ್ತೇನೆ, ಅಕ್ವೇರಿಯಂಗೂ ಕರೆದುಕೊಂಡು ಹೋಗುತ್ತೇನೆ.''

''ಹಾಂ! ನಿಜವಾಗಿಯೂ? ಹಾಗಾದರೆ ಯಾವಾಗ?''

''ಮುಂದಿನ ವಾರ.''

''ಅಯ್ಯೋ ಎಷ್ಟು ದಿನ! ಮುಂದಿನ ವಾರದ ವೇಳೆಗೆ ನಾನು ಎಷ್ಟು ಸಲ ನಿದ್ರೆ ಮಾಡಿ ಏಳಬೇಕು? ನೀನೇ ಹೇಳು.''

ನಾನು ಯೋಚಿಸಿದೆ. ಡಾಕ್ಟರು ಇನ್ನು ಮೂರು ದಿನಗಳಲ್ಲಿ ನಾನು ಹೋಗಬಹುದೆಂದು ಹೇಳಿದ್ದರು.

''ಎಷ್ಟು ಸಲವೂ ಇಲ್ಲ. ಇನ್ನು ನಾಲ್ಕೈದು ಸಲ ಅಷ್ಟೇ. ಆಮೇಲೆ ನಾವಿಬ್ಬರೂ ಹೋಗೋಣ.''

''ಹಾಗಾದರೆ ಬೇಗಲೇ ಹೋಗಬಹುದು'' ಎಂದು ತೃಪ್ತಿಯ ನಿಟ್ಟುಸಿರುಬಿಟ್ಟನು. ಅವನ ಮುಖದಲ್ಲಿ ಆನಂದದ ಮಿಂಚು ಮಿಂಚಿತು.

ಅಕ್ವೇರಿಯಂನಲ್ಲಿ ನಾವು ಕಾಣಬಹುದಾದ ದೃಶ್ಯಗಳನ್ನು ಕುರಿತು ಮಾತನಾಡುತ್ತಿದ್ದಾಗ ಮಿಸ್ ಸ್ಮಿತ್ ಬಂದಳು. ಕಣ್ಣಿನ ಆಪರೇಷನ್ ಆಗಿದ್ದ ಹುಡುಗಿ

ಯೊಬ್ಬಳು ಹೆದರಿಕೊಂಡು, ''ಹುಲಿ, ಕರಡಿ'' ಎಂದು ಕಿರುಚಿಕೊಳ್ಳುತ್ತಿದ್ದಳಂತೆ. ಹ್ಯಾರಿ ಅಲ್ಲಿಗೆ ಹೋಗಬೇಕಾಯಿತು. ''ಮತ್ತೆ ಬಂದುಬಿಡುತ್ತೇನೆ'' ಎಂದು ಹೇಳಿ ಹೋದರೂ ಪುನಃ ಮಾರನೆಯ ದಿನವೇ ಅವನು ಮತ್ತೆ ನನ್ನ ಬಳಿ ಬಂದುದು.

ಬಹಳ ಕಷ್ಟಪಟ್ಟು ಆಸ್ಪತ್ರೆಯ ಮುಖ್ಯ ಡಾಕ್ಟರರಿಂದ ಹ್ಯಾರಿಯನ್ನು ಒಂದು ದಿನದ ಮಟ್ಟಿಗೆ ಕರೆದುಕೊಂಡು ಹೋಗಲು ಅನುಮತಿಯನ್ನು ಪಡೆದೆ. ಅವನನ್ನು ಎಲ್ಲೆಲ್ಲಿಗೆ ಕರೆದುಕೊಂಡು ಹೋಗಬೇಕು, ಏನು ತಿಂಡಿ ಕೊಡಿಸಬೇಕು ಎಂದು ಯೋಚಿಸುತ್ತಿದ್ದೆ. ಆ ವೇಳೆಗೆ ನನ್ನ ಬೆಳಗಿನ ತಿಂಡಿ ಮುಗಿಯಿತು. ಹ್ಯಾರಿ ಮರುಕ್ಷಣವೇ ಅಲ್ಲಿದ್ದ.

''ವಿಲ್ಲೀಮ್ಯಾಕ್ಸ್‌ವೆಲ್‌ಗೆ ಗುಣವಾಗಿ ಮನೆಗೆ ಹೋದ. ಪಾಪ! ಮಿಸೆಸ್ ಗ್ರೇಗೆ ತುಂಬಾ ನೋವಂತೆ; ಅಳುತ್ತಿದ್ದಾಳೆ. ನಿನ್ನೆ ಬಂದ ಹುಡುಗಿಗೆ ಕಣ್ಣಿಗೆ ಬಟ್ಟೆ ಕಟ್ಟಿದ್ದಾರೆ.'' ಎಂದು ಹೇಳಿ ಒಂದು ಕ್ಷಣ ತಡೆದು, ''ಜಿಮ್ಮಿ ಮರ್ಫಿ ಈ ದಿನ ದೇವರ ಬಳಿಗೆ ಹೋದನಂತೆ'' ಎಂದು ನನಗೆ ವರದಿ ಒಪ್ಪಿಸಿ ಆಸ್ಪತ್ರೆಯ ಡಾಕ್ಟರು, ನರ್ಸು, ರೋಗಿಗಳನ್ನೆಲ್ಲಾ ಅನುಕರಿಸಿ ಆಟವಾಡತೊಡಗಿದನು. ಮಿಸೆಸ್ ಗ್ರೇ ನೋವಿನಿಂದ ನರಳುವುದನ್ನಂತೂ ಬಹಳ ನಾಟಕೀಯವಾಗಿ ತೋರಿಸಿದನು. ಗ್ರೇ ಏನಾದರೂ ಅದನ್ನು ನೋಡಿದ್ದರೆ ನೋವಿನಲ್ಲೂ ಗಟ್ಟಿಯಾಗಿ ನಗುತ್ತಿದ್ದಳು.

ನಾನು ಮಾರನೆಯ ದಿನ ಆಸ್ಪತ್ರೆಯಿಂದ ಮನೆಗೆ ಹೊರಟೆ. ನನ್ನನ್ನು ಕಳುಹಿಸಿಕೊಡುವಾಗ ಹ್ಯಾರಿ,

''ಇನ್ನೊಂದು ಬಾರಿ ಮಲಗಿ ಎದ್ದ ಮೇಲೆ, ನಾನೂ ನೀನೂ ಕ್ವಾರಿಮಮ್‌ಗೆ ಹೋಗಬಹುದಲ್ಲವೇ? ಎಂದು ಕೇಳಿ ಬೀಳ್ಕೊಟ್ಟನು. ರಾತ್ರಿಯೆಲ್ಲಾ ನನಗೆ ಹ್ಯಾರಿಯ ಕನಸೇ. ಬೆಳಗಾಗುತ್ತಲೇ ಬಾಡಿಗೆಯ ಕಾರೊಂದನ್ನು ತೆಗೆದುಕೊಂಡು ಆಸ್ಪತ್ರೆಯ ಬಳಿಗೆ ಹೊರಟೆ. ಹ್ಯಾರಿ ಧರಿಸಿದ್ದ ನೀಲಿ ಸೂಟು, ಕೋಟಿನ ಮೇಲೆ ಸಿಕ್ಕಿಸಿದ್ದ ಕೆಂಗುಲಾಬಿ ಎರಡೂ ಅವನಿಗೆ ಬಹು ಚೆನ್ನಾಗಿ ಒಪ್ಪುತ್ತಿದ್ದವು. ಟ್ಯಾಕ್ಸಿಯಲ್ಲಿ ನಾವಿಬ್ಬರೂ ಹೊರಟೆವು. ಮೋಟಾರು ಹೇಗೆ ಮುಂದೆ ಹೋಗುತ್ತದೆಂದು ಹ್ಯಾರಿ ಕೇಳಿದಾಗ ವಿಜ್ಞಾನದ ವಿಚಾರದಲ್ಲಿ ಕೇವಲ ಅಜ್ಞಾನಿಯಾಗಿದ್ದ ನಾನು ಬೆಪ್ಪಾದೆ. ಅಂದೂ ಏನೋ ಒಂದು ವೈಜ್ಞಾನಿಕ ವಿವರಣೆಯನ್ನು ಕೊಟ್ಟೆ. ನನ್ನ ವಿವರಣೆಯನ್ನು ಕೇಳಿ ಡ್ರೈವರ್ ತಡೆಯಲಾರದೆ ನಗುತ್ತಿದ್ದನು.

ಅಕ್ವೇರಿಯಂನಲ್ಲಿ ಅವನಾಡಿದ ಮಾತು, ಆಟಗಳು ಇನ್ನೂ ಕಣ್ಣಮುಂದೆ ನಡೆಯುತ್ತಿರುವಂತೆ ತೋರುತ್ತವೆ. ಕೊಳದಲ್ಲಿ ಮಲಗಿದ್ದ ಆಲಸಿ ಮೊಸಳೆಗಳನ್ನು ಸೋಮಾರಿಗಳೆಂದು ಕೂಗಿ ಅಣಕಿಸಿ ನಲಿದನು. ಏಡಿಗಳ ವಕ್ರ ನಡಿಗೆಯನ್ನು ಅನುಕರಿಸಲು ಯತ್ನಿಸಿ ವಿಫಲನಾದನು. ಬಣ್ಣ ಬದಲಾಯಿಸುತ್ತಿದ್ದ ವಿಚಿತ್ರ ಮೀನನ್ನು ಕಂಡು ಅವನಿಗಾದ ಅಚ್ಚರಿಗೆ ಕೊನೆ ಮೊದಲಿಲ್ಲ. ಆಮೆಯನ್ನು ನೋಡಿ ಅದೊಂದು ಅತಿ ವಿಚಿತ್ರವೆಂದನು. ಮುಂದೆ ಸಾಗರ-ಸಿಂಹ (Sea Lion)ಗಳನ್ನು ನೋಡಿ ಕತ್ತಿ ಮೀನಿನ ಮೇಲಿನ ಮೆಚ್ಚುಗೆ ಹೊರಟುಹೋಯಿತು. ಅವನು ಮಿತಿ ಮೀರಿದ ಆನಂದ, ಆಶ್ಚರ್ಯಗಳಿಂದ ಕುಣಿದು, ನಲಿದು ಮುಗ್ಧ ಮಾತುಗಳನ್ನು ಆಡುತ್ತಿದ್ದುದನ್ನು ಕಂಡು ಬಂದಿದ್ದ ಜನರೆಲ್ಲರೂ ಅವನನ್ನೇ ನೋಡತೊಡಗಿದರು. ಮಧ್ಯೆ ಮಧ್ಯೆ ಡಾಕ್ಟರ್ ರೇನಾಲ್ಡ್ಸ್, ಡಾಕ್ಟರ್ ಮರ್ರೇ ಮೊದಲಾದವರನ್ನು ನಾಟಕೀಯವಾಗಿ ಅನುಕರಿಸಿ ಮಾತನಾಡುತ್ತಿದ್ದುದರಿಂದಲೂ, ಜನರೆಲ್ಲಾ ಅವನ ಸುತ್ತಲೇ ನೆರೆದರು. ಕೇವಲ ಹದಿನೈದು ನಿಮಿಷಗಳಲ್ಲಿ ಮೀನುಗಳನ್ನು ನೋಡುವುದನ್ನು ಮರೆತು ಇವನ ವ್ಯಾಖ್ಯಾನಗಳನ್ನು ಕಿವಿಗೊಟ್ಟು ಕೇಳತೊಡಗಿದರು. ಸ್ವಲ್ಪ ಹೊತ್ತಿನಲ್ಲೇ ಎಲ್ಲರೂ ಕುತೂಹಲದಿಂದ ಅವನಾರೆಂದು ಕೇಳುವವರೇ ಆದರು. ಅವನು ಅಲ್ಲಿ ಬಂದಿದ್ದವರೆಲ್ಲರ ಕಣ್ಮಣಿಯಾದನು.

ಮಧ್ಯಾಹ್ನ ಒಂದು ಗಂಟೆಯಾದರೂ ಹ್ಯಾರಿ ಅಲ್ಲಿಂದ ಹೊರಬರಲು ಇಚ್ಛೆಸಲಿಲ್ಲ. ಬಗೆ ಬಗೆಯ ತಿಂಡಿಗಳನ್ನೂ ಮಧ್ಯಾಹ್ನದ ದೋಣಿಯ ಪ್ರಯಾಣವನ್ನೂ ವರ್ಣಿಸಿ ಪ್ರಯಾಸದಿಂದ ಅವನನ್ನು ಅಲ್ಲಿಂದ ಹೊರಡಿಸಬೇಕಾಯಿತು.

ನಮ್ಮ ದೋಣಿಯ ಪ್ರಯಾಣವಾದ ಮೇಲೆ ಟ್ಯಾಕ್ಸಿಯಲ್ಲಿ ಊರನ್ನೆಲ್ಲಾ ಒಂದು ಸುತ್ತು ಸುತ್ತಿದೆವು.

ಆಸ್ಪತ್ರೆಯ ಬಳಿ ಬರುವ ವೇಳೆಗೆ ಅವನಿಗೆ ನಿದ್ರೆ ಬರುತ್ತಿದ್ದಂತಿತ್ತು. ಆದರೂ ಆ ದಿನ ಕಂಡ ಮೀನುಗಳನ್ನೂ, ದೋಣಿಯಲ್ಲಿದ್ದಾಗ ಕಂಡ ಕೆಂಪಂಚಿನ ಕರಿ ಮುಗಿಲನ್ನೂ ನೆನೆಸಿಕೊಂಡು ಅವನು ಏನೇನೋ ಮಾತನಾಡುತ್ತಲೇ ಇದ್ದನು. ಆಸ್ಪತ್ರೆಯ ಬಳಿ ನರ್ಸ್ ಒಬ್ಬಳು ಟ್ಯಾಕ್ಸಿಯ ಬಳಿ ಬಂದು ಅವನನ್ನೆತ್ತಿಕೊಂಡಳು. ಅವನೊಡನೆ ಸಂತೋಷ ದಿಂದ ಕಳೆದ ಸಮಯದ ಕನಸುಗಳನ್ನು ಕಾಣುತ್ತಿದ್ದ ನನ್ನನ್ನು ಅವನೇ ಎಚ್ಚರಿಸಿ,

''ಮತ್ತೊಮ್ಮೆ ಎಂದಾದರೂ ಬರುತ್ತೀರಾ?'' ಎಂದು ಕೇಳಿ ಬೀಳ್ಕೊಟ್ಟನು.

ನಾನು ಆಸ್ಪತ್ರೆಯಿಂದ ಹೊರಬಂದ ಮೇಲೆ ಒಂದು ತಿಂಗಳಿನಲ್ಲಿ ಎರಡು ಬಾರಿ ವಿರಾಮ ದೊರಕಿಸಿಕೊಂಡು ಆಸ್ಪತ್ರೆಗೆ ಹೋಗಿ ಹ್ಯಾರಿಯನ್ನು ಕಂಡಿದ್ದೆ. ನಾನು ಅವನಿಗೆ ನಮ್ಮ ಅಕ್ವೇರಿಯಂ ಭೇಟಿಯ ನೆನಪಾಗಿ ಮೂರು ಬಂಗಾರದ ಬಣ್ಣದ ಮೀನುಗಳಿದ್ದ ಗಾಜಿನ ಗೋಳವೊಂದನ್ನು ಕೊಂಡು ಕೊಟ್ಟಿದ್ದೆ. ಎರಡು ಬಾರಿಯೂ ಅದನ್ನು ನೋಡಿ, ನಾವು ಆ ಒಂದು ದಿನದ ಸವಿನೆನಪುಗಳನ್ನು ನೆನೆಸಿಕೊಂಡು ಹರ್ಷಿಸಿದೆವು. ಮುಂದಿನ ಬೇಸಗೆ ಯಲ್ಲಿ ಹಳ್ಳಿಯ ಬಳಿ ಒಂದು ತೋಟಕ್ಕೆ ಹೋಗೋಣವೆಂದು ಯೋಚಿಸಿಕೊಂಡೆವು. ಆದರೆ ಆ ಯೋಜನೆ ನಡೆಯಲಿಲ್ಲ.

ಎರಡನೇ ಬಾರಿ ನಾನು ಆಸ್ಪತ್ರೆಗೆ ಹೋಗಿ ಬಂದು ಒಂದು ವಾರವಾಗಿತ್ತು. ಆ ದಿನ ಬೆಳಗಾಗುತ್ತಲೇ ಟೆಲಿಫೋನ್ ಗಂಟೆ ಬಾರಿಸಿತು. ರಿಸೀವರ್ ಅನ್ನು ಕಿವಿಯ ಬಳಿ ಇಟ್ಟುಕೊಂಡಾಗ ಮಿಸ್ ಸ್ಮಿತ್‌ಳ ಧ್ವನಿ ಕೇಳಿಬಂತು. ಮೆಲುದನಿಯಲ್ಲಿ ಹ್ಯಾರಿ ಇನ್ನಿಲ್ಲವೆಂದೂ, ಅಂತ್ಯದರ್ಶನಕ್ಕೆ ಬರ ಬೇಕೆಂದೂ ತಿಳಿಸಿದಳು.

ಬರುವೆನೆಂದು ಹೇಳಿ ಸಿದ್ಧವಾದೆ. ಗುಂಗುರು ಕೂದಲಿನ, ಸೋಗೆಗಣ್ಣಿನ ಸದಾ ನಗುವಿನಿಂದ ಕಂಗೊಳಿಸುತ್ತಿದ್ದ ಮುಖದ ಆ ಮಗುವಿಲ್ಲದ ಪ್ರಪಂಚ ನನಗೆ ಶೂನ್ಯವಾಗಿ ಕಂಡಿತು.

ಎಂಟು ಗಂಟೆಯ ವೇಳೆಗೆ ನಾನು ಆಸ್ಪತ್ರೆಗೆ ಬಂದಾಗ ಎಲ್ಲರ ಮುಖಗಳು ಕಾಂತಿಹೀನ ವಾಗಿದ್ದವು. ಮಿಸ್ ಸ್ಮಿತ್ ಅಳುಮುಖದಿಂದ ಹ್ಯಾರಿಯ ಕೋಣೆಯಲ್ಲಿ ನನ್ನನ್ನು ಸ್ವಾಗತಿಸಿ ಅಲ್ಲಿ ನಿಲ್ಲಲಾರದೆ ಹೊರಟು ಹೋದಳು.

ಕೋಣೆಯ ಕಿಟಕಿಗಳಿಗೆ ಪರದೆ ಹಾಕಿದ್ದು ದರಿಂದ ಕತ್ತಲೆ ತುಂಬಿತ್ತು. ನನ್ನ ಹೃದಯದಲ್ಲೂ ಅದಕ್ಕಿಂತ ಹೆಚ್ಚಿನದೇನೂ ಇರಲಿಲ್ಲ. ಕೋಣೆಯ ತುಂಬಾ ಹ್ಯಾರಿಯ ಗೊಂಬೆಗಳು, ಆಟದ ಸಾಮಾನುಗಳು ತಬ್ಬಲಿಯಾಗಿ ಚೆಲ್ಲಾಪಿಲ್ಲಿಯಾಗಿ ಬಿದ್ದಿದ್ದುವು. ನಾನವನಿಗೆ ಕೊಡಿಸಿದ್ದ ಆಟದ ದೋಣಿ ಯೊಂದು ನೀರಿನ ಬಕೆಟ್ಟಿನಲ್ಲಿ ನಡೆಸುವವರಿಲ್ಲದೆ ನಿಂತಿತ್ತು. ಗಾಜಿನ ಗೋಳದಲ್ಲಿದ್ದ ಮೂರು ಮೀನುಗಳು ತಮಗೂ ದುಃಖದ ಅರಿವಾಗಿದೆ ಯೆಂಬಂತೆ ನಿಧಾನವಾಗಿ ಸಂಚರಿಸುತ್ತಿದ್ದುವು. ಹ್ಯಾರಿ ಸಾಕಿದ್ದ ಗುಬ್ಬಚ್ಚಿಗಳೂ ಕಿಟಕಿಯಲ್ಲಿ ನೀರವವಾಗಿ ಕುಳಿತಿದ್ದುವು. ಹಾಸಿಗೆಯ ಮೇಲೆ ಹ್ಯಾರಿಯ ಬಿಳಿ ದೇಹ ಕೆಂಪು ಗುಲಾಬಿಗಳಿಂದಾವೃತವಾಗಿ ನಿದ್ರಿಸುತ್ತಿರುವಂತೆ ಕಾಣುತ್ತಿತ್ತು. ಚಿರನಿದ್ರೆ ಮಾಡು ವಾಗಲೂ ಮುಗುಳ್ನಗುತ್ತಿದ್ದ ಹ್ಯಾರಿಯ ಮುಖವನ್ನು ಕಂಡು ನನ್ನ ಕಣ್ಣಿಗಳಿಂದ ಹನಿಗಳುದುರಿದುವು.

ಮಿಸ್ ಸ್ಮಿತ್ ಒಳಬಂದು, ''ಹ್ಯಾರೀ, ನಾವು ನಿನ್ನನ್ನೆಷ್ಟು ಪ್ರೀತಿಸುತ್ತಿದ್ದೆವೆಂದು ನೀನು ಬಲ್ಲೆಯಲ್ಲವೇ?'' ಎಂದು ಗೋಳಿಡತೊಡಗಿದಳು.

ಗುಬ್ಬಚ್ಚಿಗಳು ನಿತ್ಯವೂ ಹ್ಯಾರಿ ಕೊಡುತ್ತಿದ್ದ ಆಹಾರಕ್ಕಾಗಿ ಚಿಲಿಪಿಲಿಗುಟ್ಟತೊಡಗಿದವು. ಪಕ್ಕದ ಕೋಣೆಯಲ್ಲಿ ಕಣ್ಣಿಗೆ ಬ್ಯಾಂಡೇಜ್ ಕಟ್ಟಿಸಿಕೊಂಡಿದ್ದ ಹುಡುಗಿಯೊಬ್ಬಳು,

''ಹ್ಯಾರೀ, ಎಲ್ಲಿದ್ದೀ? ಬೇಗ ಬಾ, ಹುಲಿ, ಕರಡಿಗಳು ಬರುತ್ತಿವೆ'' ಎಂದು ಕೂಗಿಕೊಳ್ಳುತ್ತಿದ್ದಳು. ಪಾಪ! ಅವಳಿಗಿನ್ನೂ ಗೊತ್ತಿರಲಿಲ್ಲ, ಹ್ಯಾರಿ ದೇವಲೋಕದ ಮಕ್ಕಳನ್ನು ಸಮಾಧಾನ ಮಾಡಲು ಹೋಗಿರುವನೆಂದು.

---

**ಈ ಕಥೆಯನ್ನು 'ಪ್ರಬುದ್ಧ ಕರ್ನಾಟಕ'ದ 42ನೇ ಸಂಪುಟದ 3ನೇ ಸಂಚಿಕೆಯಿಂದ ಆಯ್ದುಕೊಳ್ಳಲಾಗಿದೆ.**

# ಒಂದಷ್ಟು ಕ್ಯಾತೆ, ಒಂದಷ್ಟು ಜಗಳ, ಜೊತೆಗೊಂದಿಷ್ಟು ಪ್ರೀತಿ ಈಸ್ ಈಕ್ವಲ್ ಟು ರಷೀದ್

❑ ಎಸ್. ಗಂಗಾಧರಯ್ಯ



"ತನ್ನ, ತನ್ನ ಲೋಕದ ಖಾಸಗಿ ಸುಖ ನೋವುಗಳ ವಾಸನೆ ಹಿಡಿದು ಬದುಕುವ ಬರಹಗಾರ ಬರೆಯುವ ಮೊದಲು ಆನಂದದಿಂದ ನಗುತ್ತಿರುತ್ತಾನೆ ಅಥವಾ ಆತಂಕದಿಂದ ಕಂಪಿಸುತ್ತಿರುತ್ತಾನೆ ಅನಿಸುತ್ತದೆ. ನಾವು ಓದಿರುವ ದೊಡ್ಡ ಲೇಖಕರೂ, ಬರಹಗಾರರೂ ಕವಿಗಳೂ ಕಥೆಗಾರರೂ ಹೀಗೆ ನಗುತ್ತಾ ಕಂಪಿಸುತ್ತಾ ಬರೆದಿದ್ದರು ಅನಿಸುತ್ತದೆ. ಹಾಗೆ ಬರೆದವರ ಬರಹಗಳು ಎಂತಹ ಧರ್ಮದ ಕಾನೂನು ಕಟ್ಟಳೆಗಳಿಗಿಂತ, ತಲೆದಂಡಗಳಿಗಿಂತ ಅಮೂಲ್ಯವೂ ಸೂಕ್ತವೂ ಪ್ರೀತಿ ಪಾತ್ರವೂ ಆಗಿರುವುದು ಗೊತ್ತಾಗುತ್ತದೆ."

ತಮ್ಮದೊಂದು ಪ್ರಬಂಧದಲ್ಲಿ ಹೀಗೆ ಬರೆದವರು ಕವಿ, ಕಥೆಗಾರ ಅಬ್ದುಲ್ ರಷೀದ್. 'ಧ್ಯಾನ, ತಪಸ್ಸು, ಪ್ರೀತಿ ಮತ್ತು ಕೊಂಚ ತಮಾಷೆ' ಎಂಬ ಹೆಸರಿನ ಪ್ರಬಂಧ ಅದು. ರಷೀದ್ ಬರವಣಿಗೆಯಲ್ಲಿ ಅದೆಲ್ಲವೂ ಇದೆ. ಏನು ಬರೆದರೂ ಅದಕ್ಕಿಷ್ಟು ಸ್ವಚ್ಛ ತುಂಟತನವನ್ನು ಹಚ್ಚಿ ನಳನಳಿಸುವಂತೆ ಮಾಡಬಲ್ಲರು ರಷೀದ್.

ನಮ್ಮೆಲ್ಲರ ಪ್ರೀತಿಯ ಈ ಲೇಖಕರಿಗೆ ಕೇಂದ್ರ ಸಾಹಿತ್ಯ ಅಕಾಡೆಮಿಯ ಸುವರ್ಣ ಮಹೋತ್ಸವ ಪ್ರಶಸ್ತಿ ಬಂದಿದೆ. 'ಹಂಗಾಮ' ಅವರನ್ನು ಅಭಿನಂದಿಸುತ್ತದೆ.

ನಾನು ಮತ್ತೆ ಮತ್ತೆ ಓದುವ ಕಥೆಗಳಲ್ಲಿ ರಶೀದನ 'ಮೂಸಾ ಮ್ಯೊಲಿಯಾರರ ಮುದ್ದಿನ ಮಗಳು ಮತ್ತು ಹೆಲಿಪೆಟ್ಟರ್ ಎಂಬ ದುಷ್ಟ ಜಂತು' ಕಥೆಯೂ ಒಂದು. ಇವನ ಭಾಷೆಗಿರುವ ಆಪ್ತತೆ, ಕಾವ್ಯಾತ್ಮಕ ಗುಣ, ವಿಶಿಷ್ಟ ಪಾತ್ರಗಳು, ಮತ್ತವುಗಳ ಮುಗ್ಧತೆ, ಕೊಡಗಿನ ಕಾಡು, ಕಾಫಿ ತೋಟದ ಘಮಲು, ಸುರಿವ ಮಳೆ, ನಿರೂಪಣೆಯ ತಾಜಾತನ, ಓದುಗನೊಳಗೆ ಹೊಸದೊಂದು ಅನುಭವದ ಲೋಕವನ್ನು ತೆರೆದಿಡುತ್ತವೆ.

ರಶೀದನದು ಜಂಗಮ ಮನಸ್ಸು. ಇದಕ್ಕೆ ಕೂತು ಕರಗಿ ಬಿಡುವುದಕ್ಕಿಂತ, ಹರಿಯುತ್ತಾ ನಿರುಮ್ಮಳವಾಗಿ ಬಿಡುವ ಹುಮ್ಮಸ್ಸು. ಇಂಥ ಹುಮ್ಮಸ್ಸೇ ಇವನು ಗೆಳೆಯ, ಗೆಳತಿಯರನ್ನು ಇನ್ನಿಲ್ಲದಂತೆ ಗೋಳು ಯ್ದುಕೊಳ್ಳುವ, ರೇಗಿಸುವುದರ ಹಿಂದಿರುವ ಮೂಲ ಧಾತು. ಮೈಸೂರಿನ ಮಹಾರಾಜ ಕಾಲೇಜಿನಿಂದ ಮಾನಸ ಗಂಗೋತ್ರಿಯವರೆಗೆ ಒಟ್ಟೊಟ್ಟಿಗೇ ಓದಿದ ನಮ್ಮಿಬ್ಬರ ನಡುವೆ ನಡೆಯುತ್ತಿದ್ದ ಜಗಳಗಳಿಗೆ, ಮುನಿಸುಗಳಿಗೆ ಬಹುತೇಕ ಇವನ ಕೀಟಲೆ ಪ್ರವೃತ್ತಿಯೇ ಕಾರಣವಾಗಿತ್ತು.

ಕಾವು ಕೂತ ಕೋಳಿಯಂತೆ ಮುಗುಮ್ಮಾಗಿ ತಾನಾಯ್ತು ತನ್ನ ಪಾಡಾಯ್ತು ಅನ್ನುವಂತೆ ಕಾಣುತ್ತಿದ್ದ ಇವನೊಳಗೆ ಸದಾ ಜಗಳಗಂಟನೊಬ್ಬ ಜಾಗೃತ ನಾಗಿರುತ್ತಿದ್ದ. ಕೆಲವೊಮ್ಮೆ ಬೇಕಂತಲೇ ಕ್ಯಾತೆ ತೆಗೆಯುತ್ತಿದ್ದ, ದಿಢೀರ್ ಜಗಳಕ್ಕಿಳಿದು ಬಿಡುತ್ತಿದ್ದ

ಇಲ್ಲಾ ತಮಾಷೆ ಮಾಡುತ್ತಿದ್ದ ಇವನಿಗೆ ಇಂಥದ್ದೇ ಅಂತ ಕಾರಣವೂ ಬೇಕಿರಲಿಲ್ಲ. ಇಷ್ಟು ಹೊತ್ತಿಗೆ ಬರ್‍ತೀನಿ ಅಂತ ಹೇಳಿ ಯಾಕಿಷ್ಟು ಹೊತ್ತು ಕಾಯಿಸಿದೆ, ಇವತ್ತು ಪುಸ್ತಕ ಕೊಡ್ತೀನಿ ಅಂತ ಹೇಳ್ದೋನು ಯಾಕೆ ಕೊಡಲಿಲ್ಲ... ಇಂಥ ಯಾತಕ್ಕೂ ಬಾರದ ಸಣ್ಣ ಸಣ್ಣ ನೆಪಗಳನ್ನು ಮುಂದು ಮಾಡಿಕೊಂಡು ರಂಪಮಾಡಿ ಹೋಗಿಬಿಡುತ್ತಿದ್ದ. ಅಯ್ಯೋ ಈ ಸಾಬಿ ಸಹವಾಸವೇ ಸಾಕಪ್ಪ, ಅಂತ ಉಸುರುಯ್ದುಕೊಳ್ಳುವುದರೊಳಗೆ ಮತ್ತೆ ಪ್ರತ್ಯಕ್ಷನಾಗಿ, ಏನೂ ನಡೆದೇ ಇಲ್ಲವೆಂಬಂತೆ ತಮಾಷೆ ಮಾಡುತ್ತಿದ್ದ. ಇವನ ತಮಾಷೆಯ ಉಮೇದಿನೊಳಗೆ ನಾನು ಪಿಗ್ಗಿ ಬಿದ್ದ ಪ್ರಸಂಗಗಳೇ ಹೆಚ್ಚು ಚಾಲ್ತಿಗೊಳ್ಳುತ್ತಿದ್ದವು.

ನಾನು ಎಂ.ಎ. ಓದುವಾಗ ರಶೀದನ ತಂಗಿಯ ಮದುವೆಯಾಯ್ತು. ಅದಕ್ಕೆಂದು ಇವನ ಊರು ಸುಂಟಿಕೊಪ್ಪಕ್ಕ ಹೋಗಿದ್ದೆ. ಜೊತೆಗೆ ರಶೀದನ ಹೆಂಡತಿ ಮೋಲಿ ಕೂಡಾ ಇದ್ದಳು. (ಆಗಿನ್ನೂ ಮದುವೆಯಾಗಿರಲಿಲ್ಲ). ಬಸ್ಸಿನಲ್ಲಿ ಹೋಗಿದ್ದರಿಂದ ಒಂಥರಾ ಸುಸ್ತಾದಂತೆ ಎಂದಿಗಿಂತ ಮೊದಲೇ ನಿದ್ದೆ ಕಾಡತೊಡಗಿತು. ಮನೆಯ ಅಟ್ಟದಲ್ಲಿ ಮಲಗಲು ನನಗೆ ಜಾಗ ತೋರಿಸಿದ. ಸರಿ ಮಲಗಿ ಬಿಟ್ಟೆ. ನಿದ್ದೆಯೋ ನಿದ್ದೆ. ನನ್ನಂತೆಯೇ ನಿದ್ದೆಯನ್ನು ತಡೆಯಲಾರದ ಮದುವೆಗೆಂದು ಬಂದಿದ್ದ ಅಜ್ಜಿಯಂದಿರು, ಹೆಂಗಸರುಗಳು, ಅಟ್ಟವೇ ಸೂಕ್ತ ಜಾಗವೆಂದು ಬಂದು ನನ್ನ ಸುತ್ತಲೂ ಮಲಗಿ ಬಿಟ್ಟಿದ್ದಾರೆ. ಅದೂ ಇದೂ ಅಂತ ಓಡಾಡಿಕೊಂಡಿದ್ದ ರಶೀದ ಯಾಕೋ ಇದ್ದಕ್ಕಿದ್ದಂತೆ ಅಟ್ಟವನ್ನು ಹತ್ತಿದ್ದಾನೆ. ಅಜ್ಜಿಯಂದಿರು, ಹೆಂಗಸರುಗಳ ನಡುವೆ ಮಲಗಿದ್ದ ನನ್ನನ್ನು ಕಂಡು, ತನ್ನ ತಮ್ಮ, ತಂಗಿ, ಮೋಲಿಯವರನ್ನೆಲ್ಲಾ ಕರೆಕರೆದು ತೋರಿಸಿ ಬಿಟ್ಟಿದ್ದಾನೆ. ಬೇಗ ಮಲಗಿದ್ದರಿಂದ ಬೇಗನೆ ಎಚ್ಚರ ಗೊಂಡ ನಾನು ಎದ್ದು ನೋಡಿದರೆ ಸುತ್ತಲೂ ಹೆಂಗಸರು. ಮೇಲೆದ್ದು ಹೋಗೋಣವೆಂದರೆ ಕಾಲಿಡಲು ಜಾಗವಿಲ್ಲ. ಎಲ್ಲರೂ ಚೆನ್ನದಂಥ ನಿದ್ದೆಯಲ್ಲಿದ್ದಾರೆ. ವಿಪರೀತ ನಾಚಿಕೆಯಾಯ್ತು. ಇದನ್ನು ಈ ಕೀಟಲೆ ಬಡ್ಡೀಮಗ ನೋಡದಿದ್ದರೆ ಸಾಕಪ್ಪ, ಅಂತ ಅಂದುಕೊಳ್ಳುತ್ತಿರುವಾಗಲೇ ರಶೀದ ಅಟ್ಟದ ಮೆಟ್ಟಲುಗಳ ಮೇಲೆ ನಿಂತು ನನ್ನ ಹೆಸರಿಡಿದು ಕೂಗಿ ವಿಜಯದ ನಗೆ ನಕ್ಕ. ಆ ನಂತರ ಇದು ನನ್ನ ಗೆಳೆಯರ ಪಾಳೆಯದಲ್ಲಿ ಮಿಂಚಿನಂತೆ ಸಂಚಾರ ವಾಯ್ತು. ಹಾಗೆ ನೋಡಿದರೆ ಈಗಲೂ ಇವನ ಕೀಟಲೆಯ ಬತ್ತಳಿಕೆಯಲ್ಲಿ ನನ್ನ ವಿರುದ್ಧ ಬಳಸುವ ಅನೇಕ ಪ್ರಮುಖ ಅಸ್ತ್ರಗಳಲ್ಲಿ ಒಂದಾಗಿ ಉಳಿದುಕೊಂಡಿದೆ.

ರಶೀದನ ಮಾತೃಭಾಷೆ ಮಲೆಯಾಳಂ ಆಗಿದ್ದರೂ ಮನೆಯಲ್ಲಿ ಕನ್ನಡದ ಕಂಪಿತ್ತು. ಇವನ ಸಕಲ ಗುಣಗಳ ವಾರಸುದಾರಳಂತಿದ್ದ ಕೊನೆಯ ತಂಗಿ ಮಿಡ್ಲ್‌ಸ್ಕೂಲ್ ಕಲಿಯುತ್ತಿರುವ ಹೊತ್ತಿಗೇ ಕುವೆಂಪು ಕಾದಂಬರಿಗಳನ್ನು ಓದಿಕೊಂಡಿದ್ದಳು. ಡಿಗ್ರಿಗೆ ಬರುವ ಹೊತ್ತಿಗಾಗಲೇ ರಶೀದನಿಗೆ ಮಾರ್ಕ್ವೆಸ್, ಸಿಂಗರ್, ಅಚಿಬೆಯಂಥ ಮಹಾನ್ ಪ್ರತಿಭೆಗಳು ಗೊತ್ತಿದ್ದರು. ಮೂರು ತಲೆಮಾರುಗಳ ಬದುಕನ್ನು ಕಾವ್ಯದ ಕಣ್ಣಿನಿಂದ ಕಾಣಿಸುವ ಮಾರ್ಕ್ವೆಸ್‌ನ One Hundred Years of Solitude ಎಂಬ ಕಾದಂಬರಿಯನ್ನು ನಾನು ಮೊದಲ ವರ್ಷದ ಡಿಗ್ರಿ ಓದುವಾಗ ರಶೀದನಿಂದ ಪಡೆದುಕೊಂಡು ಅರ್ಥಮಾಡಿಕೊಳ್ಳಲು ಮೂರು ತಿಂಗಳಲ್ಲಿ ಮೂರು ಸರ್ತಿ ಓದಬೇಕಾಯ್ತು.

ರಶೀದನಿಗೆ ಓದುವುದರೊಳಗಿನ, ಓಡಾಡುವು ದರೊಳಗಿನ, ಪ್ರೀತಿಸುವುದರೊಳಗಿನ ಖುಷಿಗೆ ಬಲು ಬೇಗ ಲಯ ಸಿಕ್ಕಿತ್ತು. ಹಾಗಾಗಿ ಇವನಿಗೆ ಬರೆಯುವ ಬದುಕಿಗಿಂತ ಇವುಗಳೊಳಗಿನ ಜಗಿತಗಳೇ ಹೆಚ್ಚು ಆಪ್ಯಾಯಮಾನವಾಗುತ್ತಿದ್ದ ರಿಂದಲೋ ಏನೋ ಎಂದೂ ಹಠಕ್ಕೆ ಬಿದ್ದು ಬರೆದವನಲ್ಲ. ಅದೇ ರೀತಿ ಬರೆದದ್ದರ ಬಗ್ಗೆ ಮೋಹಗೊಳ್ಳುವವನಲ್ಲ. ಆಡಿದಂತೆ, ನಗಾಡಿದಂತೆ, ಅಳುವಿನಂತೆ, ಆನಂದದಂತೆ ಮುಗ್ಧವಾಗಿ ಬರೆದು ಬಿಡಬಲ್ಲ ರಶೀದ ಯಾವತ್ತೂ ಸಾಹಿತ್ಯದ ರಾಜಕಾರಣದಿಂದ ದೂರ ಉಳಿಯುವಂಥವನು. ಭಾವನಾತ್ಮಕ ಸೆಲೆಗಳೊಳಗೆ ಬದುಕಿನ ಲಹರಿಗಳನ್ನು ಹಿಡಿಯಲೆತ್ನಿಸುವ ಇವನಿಗೆ ಪೂರಕವಾಗಿ ಒದಗಿ ಬಂದು ಬರೆಯುವ ಇವನ ಬದುಕಿಗೆ ಆಸರೆಯಾಗಿ

ನಿಂತಿರುವುದೇ ಸಕಲವನ್ನು ಬೆರಗುಗಣ್ಣಿನಿಂದ ತುಂಬಿಕೊಳ್ಳುವ ಇವನ ಪ್ರೀತಿ ಮತ್ತು ಮುಗ್ಧತೆಗಳು.

ಅಂದು ಮಲೆಬೆನ್ನೂರಿನಿಂದ ಹನಿ ಫೋನ್ ಮಾಡಿ ರಶೀದನಿಗೆ ಕೇಂದ್ರ ಸಾಹಿತ್ಯ ಅಕಾಡೆಮಿಯ ಎಂಥದೋ ಪ್ರಶಸ್ತಿ ಸಿಕ್ಕಿದೆ ಅಂತ ತಿಳಿಸಿದಾಗ ಗೆಳೆಯ ನಟರಾಜ್ ಹುಳಿಯಾರ್ ಮನೆಯಲ್ಲಿದ್ದೆ. ಅಚ್ಚರಿಯನ್ನೋ, ಖುಷಿಯನ್ನೋ ನಿರೀಕ್ಷಿಸಿದ್ದ ಅವನಿಗೆ ನನ್ನಿಂದ ಅದಾವುದೂ ಹೊರಬೀಳದ್ದರಿಂದ ಅಸಮಾಧಾನಗೊಂಡ ಹನಿ ಆಗಲೇ ಗುಂಡು ಹಾಕಿಬಿಟ್ಟಿದ್ದೀಯಾ ಅಂತ ಕಿಚಾಯಿಸಿದ. ಇಲ್ಲ, ಈಗ ತಾನೇ ಸಿದ್ಧವಾಗ್ತಿದೀವಿ ಅಂದೆ. ಥಟ್ಟನೆ ಫೋನ್ ಇಟ್ಟ.

ಇದರ ಖಾತ್ರಿಗಾಗಿ ಬೆಳಗ್ಗೆ ಎದ್ದವರೇ ನಾನು, ನಟರಾಜ್ ಪತ್ರಿಕೆ ನೋಡಿದರೆ, ಪತ್ರಿಕೆಯ ತುಂಬಾ ವೀರಪ್ಪನ್ ಹೆಣವಾಗಿ ಮಲಗಿದ ಚಿತ್ರ ಮತ್ತು ಸುದ್ದಿಗಳು.

ಬಸ್ಸಿನಲ್ಲಿ ಕೂತು ಫೋನ್ ಮಾಡಿ ಏನಪ್ಪಾ ಅಂದೆ.

'ಹೌದು ಬಿಡಪ್ಪಾ, ಇದೇ ಏನಾದ್ರೂ ಯಾರಾದ್ರೂ ಸೊಣಬರಿಗೆ ಬಂದಿದ್ರೆ, ಸನ್ಮಾನ ಸಮಾರಂಭಾನೇ ಇಟ್ಕೊಂಡು ಬಿಡ್ತಿದ್ದೆ' ಅಂತ ನಗಾಡಿದ.

ವಿಶೇಷವಿಲ್ಲದಿದ್ದರೂ ವಿಶೇಷಾಂಕಗಳೆಂದು ಕರೆಸಿಕೊಳ್ಳುತ್ತಿರುವಂತೆ, ಇಂದಿನ ಯಾವುದೇ ಪ್ರಶಸ್ತಿಗೂ ಕವಡೆ ಕಿಮ್ಮತ್ತಿಲ್ಲವೆಂಬುದು ಎಲ್ಲಾ ಸೂಕ್ಷ್ಮ ಮನಸ್ಸುಗಳಿಗೂ ಗೊತ್ತಿರುವಂಥದೇ. ಆದರೂ, ಒಂದು ಸಣ್ಣ ನಾಚಿಕೆ, ಒಂಚೂರು ಮರ್ಯಾದೆ, ಲೇಖಕನೊಳಗಿನ ಬರೆಯುವ ಶಕ್ತಿಯನ್ನು ಬರವಣಿಗೆಯ ಚಂದವನ್ನು ಹೆಚ್ಚಿಸುತ್ತವೆ ಅನ್ನುವುದಕ್ಕೆ ನಮ್ಮೆದುರು ಕೆಲವು ನಿದರ್ಶನಗಳಿರುವುದರಿಂದ, ಇಂಥ ಗುಣಗಳು ಇವನೊಳಗೆ ನಿರಂತರವಾಗಿರಲಿ ಮತ್ತು ಮತ್ತಷ್ಟು ಚಂದದ ಬದುಕು ಇವನಿಂದ ಬರಲಿ. ●



ಎಸ್. ಗಂಗಾಧರಯ್ಯ
'ದೊಡ್ಡಮ್ಮಜ್ಜ', 9ನೇ ಮೈನ್,
ಕಂಚಗಟ್ಟ ಬಡಾವಣೆ, ತಿಪಟೂರು

## ರಷೀದ್ ಕವಿತೆ

# ಹಸುವಿನಂತಹ....

ಹಾಲು ಕರೆಯುವ ಹಸುವಿನಂತಹ ಹಾದರಗಿತ್ತಿ
ಮುದುಕಿ, ಹೆಂಗಸು, ಹತ್ತಿರಕ್ಕೆ ಇನ್ನೂ ಹುಡುಗಿ
ಅರೆ ಸೀರೆ ಮೊಣಕಾಲಿಗೆ ಎತ್ತಿ
ಆಕಳ ಅವುಡಿಗೆ ತಾಡನ ನಡೆಸಿದ್ದಾಳೆ ಹುಚ್ಚಿ
ಹುಚ್ಚೀ ಹಿಡಿಸುವ ಹಳೆಯ ಹಾದರಗಿತ್ತಿ

ಕಂದು ಆಕಳ ಹಿಂಬದಿ ಕಂಡು ಕಣ್ಣು ಮುಚ್ಚುತ್ತಾಳೆ
ಗಂಡಸಿನಂತಹ ತನ್ನ ಬಾಲವ ತಾನೇ ನೆಕ್ಕುವ
ತಾನೇ ಹಾಲು ಎಳಕೊಳ್ಳುವ, ಬಿಡುವ
ಅದರ ಕೊರಳ ವಿಟನಂತೆ ಸವರುತ್ತಾಳೆ
ಎಷ್ಟೋ ಮಾಡಿ ಮುಗಿಸಿ ಬೇಡವೆಂದು ಅಂದು ನೆಲಕ್ಕೆ
ಊರಿ ಕುಂತ ಸುಂಟರಗಾಳಿ.
ಅವಳ ಮೊಲೆಗಳು ಬಿರಿದದ್ದು, ಬೆಳೆದದ್ದು, ಹಾದಿಹೋಕರ

ಹೊಟ್ಟೆ ಉರಿಸಿದ್ದು ಈಗ ಒಣಗಿದ ಎಳ್ಳಂತೆ ಕಡುವಾಗಿದೆ
ಕಡು ನೀಲ ಆಕಾಶಕ್ಕೆ ತಿಳಿನೀಲ ಮೋಡದಂತೆ
ಅವಳ ತೋಳ ನರಬಳ್ಳಿಗಳು ತಬ್ಬಿದೆ.
ಅವಳ ಬಿಗಿದುಕೊಂಡಿದ್ದ ತೊಡೆಗಳು ಸಡಿಲವಾಗುತ್ತಾ
ಸ್ನಾಯುವಾಗುತ್ತಾ ಒಂದಕ್ಕೊಂದು ಮುಟ್ಟಿ
ಮರದ ಜೀವಂತ ಗ್ರಾಮದೇವತೆಯಂತೆ
ಕೂತಿದ್ದಾಳೆ ಆಕಳ ಮುಂದೆ,
ಕಾಯಲು ಹೇಳುತ್ತಿದ್ದಾಳೆ ಈ ಹಳೆಯ ಹಾದರದ ಹೆಂಗಸು
ಆಕಳೊಡನೆ ಮಾತು ಆಡಿ.

ಅವಳ ಗ್ರಾಮಕ್ಕಿರುವ ಆಕಾಶ ಅವಳು
ಮತ್ತೆಲ್ಲ ಬರಿಯ ಜನರು, ಜನರೆಂದರೆ
ಬರಿಯ ಗಂಡಸರು.
ಉಟ್ಟದ್ದನ್ನು ಉರಿಗೆ ಎಸೆದವೆಂದು
ಕಂಕುಳಲ್ಲಿ ಬೆವರು ಸೂಸುವ ಬರಿಯ
ಹುಡುಗರು. ಗಂಡಸರಂತೆ
ಗರ್ವ ಉಳ್ಳವರು.
ಹಾದರವನು ಆಶೆ ಪಡುವರು
ಕಂಡೊಡನೆ ಪೋಲಿ ಮಾತುಗಳ ಹೇಳಿ ರಮಿಸಿ
ಮುಖ ಸೆಟೆಸಿ ಹೋಗುವರು, ಅಯ್ಯೋ
ಮಕ್ಕಳಂತಹ ಗಂಡು ಆಡುಗಳು.

ಪೇರಲೆಯ ಗೆಲ್ಲುಗಳಂತಹ ಅವಳ ತೋಳುಗಳು ಬಾಗಿ
ಪೇಲವವಾಗಿ.. ಆದರೂ ಆಸೆ ಪಡುವರು ಅವಳನ್ನು
ಹುಳಹರಿದ ಹಣ್ಣಿಂತಹ ಅವಳ ತುಟಿಗಳ ಗಾಯಮಾಡಿ
ಅವಳ ತೋಳುಗಳ ಎತ್ತಿ ಗೇರಸಾರಾಯಿಯಂತಹ
ಬೆವರಸೆಲೆ ದಾರಿಯಲ್ಲೆಲ್ಲ ಮನಸನೋಡಿಸುವರು
ಹೆದ್ದಾರಿಯ ಅರಿಯದ ಲಾರಿ ಚಾಲಕರೂ ಸೇರಿ.

ಅವಳ ಕಣ್ಣುಗಳಲ್ಲಿ ಆಕಾಶವಿದೆ.. ಅವಳ ಬಾಗಿದ ಬೆನ್ನಿಗೆ
ಆಕಳು ಕಂದು ಬಂದಿದೆ ಸಂಜೆಯಾದಂತೆ
ಅವಳ ಗ್ರಾಮಕ್ಕೊಬ್ಬಳೇ ಅವಳು ಎಂಥ ಹಾಯುವ
ಗೊಣಗುವ ಆಕಳ ಮೊಲೆಯಲ್ಲೂ ಹಾಲ ಬರಿಸುವವಳು.

● ಅಬ್ದುಲ್ ರಷೀದ್

ಅಬ್ದುಲ್ ರಷೀದ್, 83/1, 6ನೇ ಮೈನ್, 2ನೇ ಬ್ಲಾಕ್, ಜಯಲಕ್ಷ್ಮೀಪುರಂ, ಮೈಸೂರು

# ಮರಳಿ ಮಣ್ಣಿಗೆ...

❑ ಗಾನಾ ಜೋಯ್ಸ್

**ಕ**ಣ್ಣ ಹನಿ ಹೊಯ್ದು, ಬೆವರ ಹನಿ ಹನಿ ಉಣಿಸಿ ಬೆಳೆಸಿದ ಫಸಲು, ತೇರಂತೆ ತಲೆ ಎತ್ತಿದ ಬಂಗಾರದ ಸಾಲು ಸಾಲು.

ಮಗಳ ಮದುವೆ, ಅಡವಿರುವ ಮನೆ, ಹೊಸತೆರಡು ಎತ್ತು, ಈ ಸರ್ತಿಯಾದರೂ ಬೋರುವೆಲ್ಲು... ಆಗತ್ಯದ್ದೇ ಆಸೆಗಳು. ಅನಿವಾರ್ಯದ್ದೇ ಕನಸುಗಳು. ಹೆಂಡತಿಯ ಟ್ರಂಕೂ ಕಿಲುಬುತ್ತಾ ಕಾಯುತ್ತಿತ್ತು-ಒಂದೇ ಒಂದು ಸೀರೆ!? ಇಪ್ಪತ್ತೈದರ ಗಂಟು ಜಡೆಯ ಮಗಳು, ರೌಡಿಯಾಗಿ ಓಡಿಹೋದ ಮಗನ ಜಾಗ ತುಂಬಿ ನಿಂತಿದ್ದಾಳೆ. ಅವಳಿಗೂ ಒಂದು ಮದುವೆ. ಹೆಣ್ಣು ಅನ್ನೋದು (ಸದ್ಯ!) ನೆನಪಿದೆ. ತೂನೆದಾಡುವ ತೆನೆಸಾಲು. ಕಣ್‌ಬತ್ತಿದ ಮುದಿರೈತನಲ್ಲೂ ಭರವಸೆಯ ಸರಭರ. ಪಕ್ಕದೂರಿನ ಭಾರೀ ಪಗಡಿಯ ಗಂಡು. ಎರಡನೇ ಸಂಬಂಧ (ಅದಕ್ಕೂ ನಸೀಬು ಬೇಕು). ಹತ್ತೇ ಸಾವಿರ ತೆರ ( ಚೌಕಾಸಿ ಮಾಡೀ ಮಾಡೀ ನಿಂತದ್ದು). ಅಂತೂ ಇಂತೂ ಬೆವರು ಸುರಿಸಿ ಹೊಲ ಹಸಿರಾಗಿಸಿದ್ದವಳು, ಹಾಲುಕ್ಕಿಸಿ ಮನೆ ಉಸಿರಾಗಲು ಹೊರಟು ನಿಂತಳು.

ಊಹುಂ... ಕಾಲ ಬೇಕು ಅದಕ್ಕೂ. ಕಾಲವೀಗ ಕಟಾವಿಗೆ ಕಾದು ನಿಂತಿತ್ತು!

ಇಷ್ಟೆಲ್ಲಾ ಕಥೆ- ಮುಕ್ಕಾ ಮೂಲೆ ಹಳ್ಳಿಯ ಕತ್ತಲು ಮನೆಯ ಗೋಳು- ಆ ರಾಜ್ಯದ ರಾಜನಿಗೆ. ಅವನೋ ಭಾರೀ ನಾಜೂಕಯ್ಯ. ಮಣ್ಣು - ಚಪ್ಪಲಿಗೂ ತಾಗಬಾರದೆಂಬಂಥವ. ನೆಲ ಕಾಣುವುದೇ ಇಲ್ಲ ಅವಗೆ, ನೆತ್ತಿಯ ಮೇಲೆ ಕಣ್ಣು!

ಕಟ್ಟ ಹೊರಟ ಭಾರೀ ಸೌಧ. ತಳಹದಿಗೆ ಟೊಳ್ಳು ಚಪ್ಪಡಿ, ವರಲೆ ಮಣ್ಣು ಮೇಲಿನ ಸೌಧಕ್ಕೆ ಗಂಧ ಬಾಗಿಲು, ದಂತ ಕಂಬಗಳು.

ಮೂಲೆ ಹಳ್ಳಿಯ ಮುದಿರೈತ ಟೊಳ್ಳಾಗಿ, ಒರಲೆ ಹಿಡಿದು, ಬೆನ್ ಮುರಿದು ಮಲಗಿದ. ಮೇಲೆ - ಥಕಥಕಾಲತ್ ಭಾರೀ ಸೌಧ ಎದ್ದು ನಿಂತಿತು.

ಕೆಳಗೆ ಅಲ್ಲಾಡುತ್ತಿದ್ದ ರೈತ-ಅಂತೂ ಕಟಾವು ಮಾಡಿನಿಂತ. ಸೌಧದೊಳಗೆ ಕುಂತ ರಾಜ ಪೈಪೆಳೆಯುತ್ತಿದ್ದ.

ಮಾರುಕಟ್ಟೆ-ವಸ್ತುಗಳದ್ದು, ಫಸಲಿನದ್ದು, ಜತೆಗೇ ಮಾನದ್ದು-ಜೀವದ್ದೂ!

ಬಿಕರಿಗಿಟ್ಟ ರೈತ.

ಟೆಕ್ನಾಲಜಿ, ಕಂಪ್ಯೂಟರ್ರು ತಿನ್ನುವ ರಾಜ. ಅನ್ನದ ಬೆಲೆ, ಮಣ್ಣಿನ ಬೆಲೆ, ತಿಳಿದೀತಾದರೂ ಹೇಗೆ? ಕಣ್ಣೀರಿನ ಬೆಲೆಯೂ ಗಿಟ್ಟಲಿಲ್ಲ. ಬೆವರಿನ ಲೆಕ್ಕ ತೀರಲಿಲ್ಲ. ಅಯ್ಯೋ ... ಕಿರುಚಬೇಕೆಂದುಕೊಂಡ. ದನಿ ಹೊರಡಲಿಲ್ಲ.

ರೈತನ ಹೆಂಡತಿಯ ಸೀರೆ ಹಪ್ಪಾಯಿತು. ಅದು ಅವಳನ್ನು ಹೊತ್ತು ತೊಲೆಗೆ ಜೋತು ಬಿತ್ತು. ಅರ್ಜೆಂಟು ಮದುವೆಯ ಮುದಿಗಂಟು ಕಾದೂ ಕಾದೂ ಇನ್ನಾರಿಗೋ ಗಂಟು ಬಿದ್ದ. ರೈತ ಮಿಕ ಮಿಕಾಂತ ನಿಂತುಬಿಟ್ಟ. ಸುತ್ತಲೂ ಅವನ ಹಾಗೇ ಮೂಟೆ ಚೆಲ್ಲಿದ ನೂರೆಂಟು ಮಂದಿ. ಹೊಟ್ಟೆ ತುಂಬಾ ಕೆಂಡ ಕೆಂಡ ಕೆಂಡ. ಬಾಯಿ ಬಿಟ್ಟರೆ ಬಡಬಾಗ್ನಿ ಹೊಮ್ಮುತ್ತಿತ್ತೇನೋ! ಒಳಗಿನುರಿಗೆ ತಾವೇ ಉರಿದುರಿದರು. ಉರಿತಾಳದೇ ಮರ, ಹಗ್ಗ, ವಿಷ - ಅಂತ ಹುಡುಹುಡುಕಿ ತಣ್ಣಗಾದರು. ಮುಗಿದೂ ಹೋದರು.

ಹೊಟ್ಟೆ ಹೊತ್ತ ರಾಜ ತೇಗುತ್ತಾ ಬಂದ. ಕೈಯಲ್ಲಿ ಪರಿಹಾರದ ಚೆಕ್ಕು. ಎತ್ತಾಗಿ ನಿಂತಿದ್ದ ಮಗಳು ಅದನ್ನು ಎಡಗೈಲಿ ಇಸಕೊಂಡು ಬಲಗೈಲಿ ಹರಿದುಹಾಕಿದಳು. ಪರಿಹಾರದ ಚೂರುಗಳು ಕೊಟ್ಟವನ ಬಾಯಿಗೇ ಬಿದ್ದವು.

ಗುಮ್ಮುವಂತೊಮ್ಮೆ ಗುಟುಕು ಹಾಕಿದಳು.

ಟೊಪ್ಪಿಮಂದಿ ಫೇರಿ ಕಿತ್ತರು!

ಇವಳು ಮತ್ತೆ ಮೂಕವಾಗಿ ನೊಗ ಹೊತ್ತು ಹೊಲಕ್ಕಿಳಿದಳು- ಮತ್ತಷ್ಟು ಬೆವರು, ಮಗೆದಷ್ಟೂ ಕಣ್ಣೀರು ಜತೆಗಿಟ್ಟುಕೊಂಡು...

●

# ಮಿಸೆಸ್ ಅಯ್ಯರ್‌ಳ ಇನ್ನೊಂದು ಮುಖ

❑ ಇಂದಿರಾ

ಅಪರ್ಣ ಸೇನ್‌ರ 'ಮಿ. ಅಂಡ್ ಮಿಸೆಸ್ ಅಯ್ಯರ್' ಚಿತ್ರ ನೋಡಿ ಹೊರಬಂದಾಗ ಒಂದು ಪ್ರಶ್ನೆ ನನ್ನನ್ನು ತೀವ್ರವಾಗಿ ಕಾಡಿತು. ಮಿಸೆಸ್ ಅಯ್ಯರ್ ತನ್ನ ಸಹ ಪ್ರಯಾಣಿಕ ರಾಜಾಜಹಂಗೀರ್‌ನನ್ನು 'ಇದ್ದಕ್ಕಿದ್ದಂತೆ' ತನ್ನ ಗಂಡನೆಂದು ಒಪ್ಪಿಕೊಂಡಿದ್ದೇಕೆ? ಆ ಕ್ಷಣಕ್ಕೆ ಮೊದಲು ಸ್ಪಷ್ಟವಾಗಿ ಹೊಳೆದ ಕಾರಣ, ತನ್ನ ಸಹ ಪ್ರಯಾಣಿಕನನ್ನು ಸಾವಿನಿಂದ (ಕಗ್ಗೊಲೆ?) ಪಾರು ಮಾಡಬೇಕೆಂಬ ಮಿಸೆಸ್ ಅಯ್ಯರ್‌ಳ ಸಹಜ ಮಾನವೀಯ ಕಾಳಜಿ. ಆಕೆ ರಾಜಾನ ಬಗ್ಗೆ ಇರುವ ತನ್ನ ಎಲ್ಲ ಅಸಹನೆಗಳ ಜೊತೆಗೂ ಅವನನ್ನು ರಕ್ಷಿಸುವ ಪ್ರಯತ್ನ ಮಾಡುತ್ತಾಳೆ. ಆಕೆಯ ಅಸಹನೆಯೆಂದರೆ ಮೂಲಭೂತವಾಗಿ ಆತ ಮುಸ್ಲಿಂ ಎನ್ನುವುದು. ತಾನು ಸಂಪ್ರದಾಯಸ್ಥ ಹಿಂದೂ ಅಯ್ಯರ್ ಹೆಣ್ಣುಮಗಳಾಗಿರುವುದು (ಅವನು ಕಚ್ಚಿ ಕುಡಿದ ನೀರಿನ ಬಾಟಲಿಯಿಂದ ನೀರು ಕುಡಿಯುವಾಗ ಅವಳು ಮುಖ ಸಿಂಡರಿಸಿಕೊಳ್ಳುವುದರಿಂದ ಈ ಭಾವನೆ ಹೆಚ್ಚು ಸ್ಪಷ್ಟವಾಗುತ್ತದೆ).

ಪ್ರಯಾಣದ ನಡುವೆ ಕೋಮು ಗಲಭೆ ಭುಗಿಲೆದ್ದಾಗ ಮುಸ್ಲಿಂ ಮೂಲಭೂತವಾದಿಗಳು ಬಸ್‌ನಲ್ಲಿರುವ ಗಂಡಸರನ್ನಷ್ಟೇ ಬೇರ್ಪಡಿಸಿ ಪ್ರತಿಯೊಬ್ಬರನ್ನು (ಲಿಂಗ ಪರೀಕ್ಷಣೆಯೂ ಸೇರಿದಂತೆ) ಅವರು ಮುಸ್ಲಿಂ ಹೌದೇ ಅಲ್ಲವೇ ಎಂದು ಸಖಿಶಿಖಾಂತ ಪರೀಕ್ಷೆಗೆ ಒಳಪಡಿಸಿದಾಗ ಮಿಸೆಸ್. ಅಯ್ಯರ್ 'ಪ್ರಜ್ಞೆ' ಇದ್ದಕ್ಕಿದ್ದಂತೆ ಜಾಗೃತವಾಗುತ್ತದೆ. ತನ್ನ ತೊಂಕಳಲ್ಲಿರುವ ತನ್ನ 'ಮುದ್ದು' ಕಂದ ಸಂತಾನಂನನ್ನು ರಾಜಾನ ಕೈಗೆ ತುರುಕಿ, ಆತ ತನ್ನ ಗಂಡ ಮಿಸೆಸ್.ಅಯ್ಯರ್ ಎಂದೂ ತನ್ನ ಮಗುವಿನ ತಂದೆಯೆಂದೂ 'ಕಟುಕ'ರಿಗೆ ಹೇಳುತ್ತಾಳೆ. ಅವರು ಅವಳ ಮಾತು ನಂಬಿ ರಾಜಾನನ್ನು ಬಿಟ್ಟು, ಬದುಕಿನ ಮುಸ್ಸಂಜೆಯಲ್ಲಿರುವ ಹಣ್ಣು ಹಣ್ಣು ಮುದುಕನನ್ನು 'ವಧೆ'ಗಾಗಿ ಆರಿಸಿಕೊಳ್ಳುತ್ತಾರೆ.

ಈ ಅನಿಸಿಕೆಯ ಬೆನ್ನಲ್ಲೇ ಮತ್ತೊಂದು ಅನುಮಾನ ಕಾಡತೊಡಗಿತು. ಮೀನಾಕ್ಷಿ (ಮಿಸೆಸ್.ಅಯ್ಯರ್) ರಾಜಾನನ್ನು ನಿಜಕ್ಕೂ ಮಾನವೀಯ ಕಾಳಜಿಯಿಂದ ರಕ್ಷಿಸಿದಳೇ? ಆಕೆ ತನ್ನ ಸ್ವಾರ್ಥಕ್ಕಾಗಿ ಹಾಗೂ ತೀರಾ ವ್ಯಾವಹಾರಿಕ ಕಾರಣಗಳಿಗಾಗಿ ರಾಜಾನನ್ನು ತನ್ನ ಗಂಡನೆಂದು ಒಪ್ಪಿಕೊಂಡಳೇ?

ಈ ನನ್ನ ಅನಿಸಿಕೆಗಳಿಗೆ ಕಾರಣ ಇಲ್ಲದಿಲ್ಲ. ತರ್ಕಕ್ಕಾಗಿಯಾದರೂ ಯೋಚಿಸಿದರೆ; ಆಕೆ ತನಗೆ ಇದುವರೆಗಿನ ಪ್ರಯಾಣದಲ್ಲಿ ಸಹಾಯ ಮಾಡಿಕೊಂಡು ಬಂದ ರಾಜಾನನ್ನು ಕಳೆದುಕೊಳ್ಳಲು ಸಿದ್ಧವಿರಲಿಲ್ಲ. ಬಸ್‌ನಲ್ಲಿ ಎಲ್ಲರೂ ಸಂತಾನಂ ಅವಾಂತರದಿಂದ ಮುಖ ಸಿಂಡರಿಸಿಕೊಂಡಾಗ ಆಕೆಯ ನೆರವಿಗೆ ಒದಗುವವನು ರಾಜಾ ಮಾತ್ರ.

ಚಿತ್ರ ಮುಂದುವರಿದಂತೆ ಒಂದು ಹಂತದಲ್ಲಿ ಅರಣ್ಯ ವಸತಿಗೃಹದಲ್ಲಿ ತಂಗಿದಾಗ ಕೋಮುಗಲಭೆ ಮಿಸೆಸ್ ಅಯ್ಯರ್ ಮತ್ತು ರಾಜಾ ಅವರ ತೀರಾ ಸಮೀಪಕ್ಕೆ ಬಂದು ನಿಂತು ಬಿಡುತ್ತದೆ. ಇದಕ್ಕೆ ಮುನ್ನ ರಾಜಾ ತಾನು ಅವರಿಬ್ಬರನ್ನು ಬಿಟ್ಟು ಹೊರಡುವ ತನ್ನ ತೀರ್ಮಾನವನ್ನು ಹೇಳುತ್ತಾನೆ. ಆಕೆ ಅವನನ್ನು ತಡೆದು, ತಾನು ತನ್ನ ಮಗ ಆ ಸಂದರ್ಭದಲ್ಲಿ ರಕ್ಷಣೆಗಾಗಿ ಅವನನ್ನೇ ಅವಲಂಬಿಸಿರುವುದಾಗಿ ಹೇಳುತ್ತಾಳೆ. ಆಗ ರಾಜಾಗೆ ಅವರಿಬ್ಬರನ್ನೂ

---

**ಅಕ್ಟೋಬರ್ 15 ರ ಸಂಚಿಕೆಯಲ್ಲಿನ 'ಟೂರಿಂಗ್ ಟಾಕೀಸ್' ಅಂಕಣದಲ್ಲಿ ಪ್ರಕಟವಾದ ಮಂಜುಳಾ ಕೆ. ಅವರ 'ಮನುಷ್ಯರು ಗೋಚರವಾಗುವ ಕ್ಷಣಗಳು' ಬರಹಕ್ಕೆ ಪ್ರತಿ ಸ್ಪಂದನ.**

ಬಿಟ್ಟು ಹೋಗಲಾರದಂಥ ಸ್ಥಿತಿ ನಿರ್ಮಾಣ ವಾಗುತ್ತದೆ. ಆ ಯೋಚನೆಯನ್ನು ಅವನು ಬಿಟ್ಟು ಬಿಡುತ್ತಾನೆ.

ಈ ಮಾತುಗಳ ಮೂಲಕ ಮೀನಾಕ್ಷಿಯು ರಾಜಾನನ್ನು ಉಳಿಸಲು ನಿಜವಾದ ಕಾರಣ ಅರ್ಥವಾಗುತ್ತದೆ. (ಆದರೆ ಅನಂತರ ನಡೆದ ಬೆಳವಣಿಗೆಯಲ್ಲಿ ಅವರಿಬ್ಬರ ನಡುವಿನ ಸಂಬಂಧ ಗಾಢವಾಗುತ್ತದೆ. ಆಗ ಅವರ ನಡುವೆ ಹೆಸರಿಸ ಲಾಗದಂಥ ಒಂದು 'ತಂತು' ರೂಪುಗೊಳ್ಳುತ್ತದೆ. ಕೊನೆಯಲ್ಲಿ ಬೇರೆಯದೇ ಆದ ಒಂದು ಅನುಭೂತಿ ಕೊಡುವ ಈ ಚಿತ್ರ ರೈಲ್ವೆ ನಿಲ್ದಾಣದಲ್ಲಿ ಮೀನಾಕ್ಷಿ ತನ್ನ ಗಂಡನೊಂದಿಗೆ ಸೇರಿಕೊಂಡಾಗ ರಾಜಾ-ಮೀನಾಕ್ಷಿಯಿಂದ ದೂರ ಸರಿಯುವ ದೃಶ್ಯವನ್ನು ನೋಡುವಾಗ ಪ್ರೇಕ್ಷಕನಿಗೆ ತಾನೇ ಏನನ್ನೋ ಕಳೆದುಕೊಂಡ ಗಾಢ ಭಾವ ಸಹಜವಾಗಿಯೇ ಕಾಡುತ್ತದೆ ಎನ್ನುವುದು ಬೇರೆಯದೇ ಸಂಗತಿ). ಆದರೆ ಮೀನಾಕ್ಷಿಯ ಆ ಕ್ಷಣದ ಆಯ್ಕೆ ಮಾತ್ರ ನಮ್ಮ ಸದ್ಯದ ಗೊಂದಲಗಳಿಗೆ ಕನ್ನಡಿ ಹಿಡಿದಂತಿದೆ ಎನ್ನುವುದರಲ್ಲಿ ಮಾತ್ರ ಯಾವುದೇ ಅನುಮಾನವಿಲ್ಲ. ಎರಡು ವರ್ಷಗಳ ಹಿಂದೆ ಗೋಧ್ರಾ ಘಟನೆಯ ಹಿನ್ನೆಲೆಯಲ್ಲಿ ಗುಜರಾತ್‌ನಲ್ಲಿ ನಡೆದ ಸರ್ಕಾರಿ



ಪ್ರಾಯೋಜಿತ ನರಮೇಧದ ಸಂದರ್ಭದಲ್ಲಿ ಶಿಕ್ಷಿತ ಮಧ್ಯಮವರ್ಗ ನರಮೇಧ ನಡೆಸಿದವರ ಪರವಾಗಿ ನಿಂತು, ಅದನ್ನು ಸಮರ್ಥಿಸಿಕೊಂಡದ್ದಕ್ಕೂ ಮೀನಾಕ್ಷಿಯ ಆಯ್ಕೆಗೂ ಸ್ಪಷ್ಟವಾದ ಕಾರಣಗಳು ಗೋಚರವಾಗುತ್ತವೆ. ಎರಡೂ ಹೆಚ್ಚೂ ಕಡಿಮೆ ಒಂದೇ ಎನಿಸುತ್ತದೆ.

ಗೋಧ್ರಾ ರೈಲ್ವೆ ನಿಲ್ದಾಣದಲ್ಲಿ ಇನ್ನೂ ತೀರ್ಮಾನವಾಗದ ಕಾರಣಗಳಿಗೆ (ರೈಲ್ವೆಸಚಿವ ಲಾಲೂ ಪ್ರಸಾದ್ ಯಾದವ್ ಈ ಘಟನೆಯ ಬಗ್ಗೆ ಹೊಸ ತನಿಖೆ ಆರಂಭಿಸಿದ್ದಾರೆ. ಕಾರಣ ಅದರಲ್ಲಿರುವ ದುರ್ಬಲ ತಂತುಗಳು!) 58 ಜನ 'ಕರಸೇವಕರ' ಮಾರಣ ಹೋಮ ನಡೆದಾಗ, ಸಂಘ ಪರಿವಾರ ತನ್ನ ಶಿಕ್ಷಿತ ಮಧ್ಯಮ ವರ್ಗದ ಸಹಕಾರದೊಂದಿಗೆ ಮುಸ್ಲಿಂ ಜನಾಂಗದ ಮೇಲೆ ರಣ ಹದ್ದುಗಳಂತೆ ಎರಗಿತು. ಇದು ಎಲ್ಲ ವಿಚಾರಣಾ ಆಯೋಗದಲ್ಲೂ ರುಜುವಾತಾದ ಸತ್ಯ. ( ಈ ಸತ್ಯಕ್ಕೆ ಕನ್ನಡಿ ಹಿಡಿಯುವ 'ಫೈನಲ್ ಸಲ್ಯೂಷನ್ಸ್' ನಂಥ ಚಿತ್ರದ ಪ್ರದರ್ಶನಕ್ಕೆ ಸಂಘ ಪರಿವಾರ ಬೆಂಗಳೂರಲ್ಲಿ ಅಡ್ಡಿಪಡಿಸಿದ್ದು ನೆನಪಾಗು ತ್ತದೆಯೇ?) ಈ ನರಮೇಧಕ್ಕೆ ಮೋದಿ ನೇತೃತ್ವದ ಸರ್ಕಾರ ಮೂಕಪ್ರೇಕ್ಷಕನಂತೆ ವರ್ತಿಸಿತು. ಜನರ ರಕ್ಷಣೆಗೆ ಮುಂದಾಗಬೇಕಾದ ಪೊಲೀಸರು ಅವರ ಕೊಲೆಗೆ ಮುಖ ತಿರುಗಿಸಿ ನಿಂತರು. (ಗೋವಿಂದ ನಿಹಲಾನಿ ಅವರ 'ದೇವ್' ನೆನಪಾಗುವುದೇ? ರಕ್ಷಣೆಗೆ ಧಾವಿಸದಂತೆ ಗೋಡೆಯಾಗಿ ನಿಲ್ಲುವ ಓಂಪುರಿ ಕಣ್ಣ ಮುಂದೆ ಪ್ರತ್ಯಕ್ಷವಾಗುವುದಿಲ್ಲವೇ?) ನರಮೇಧದ ನಂತರ ಹಿಂದೂ ವೈದ್ಯರು ಮುಸ್ಲಿಂ ಗಾಯಾಳುಗಳಿಗೆ ಚಿಕಿತ್ಸೆ ನೀಡಲು ನಿರಾಕರಿಸಿದರು. ಹಿಂದೂ ವಕೀಲರು ಅವರ ಪರ ನ್ಯಾಯಾಲಯದಲ್ಲಿ ಮೊಕದ್ದಮೆ ದಾಖಲಿಸಲು ಸಾಧ್ಯವಿಲ್ಲ ಎಂದರು. ಈ ಕೋಮುಗಲಭೆಯಲ್ಲಿ ನೊಂದ ಮುಸ್ಲಿಂರಿಗೆ ಪರಿಹಾರ ಪಡೆದುಕೊಳ್ಳುವುದು ಕೂಡ ಕಷ್ಟ ವಾಯಿತು. ಆಗ ಕೇಳಿಸಿದ್ದು ಕೇವಲ ನೋವಿನ ಆಕ್ರಂದನ ಮಾತ್ರ. ಇವೆಲ್ಲ ನಡೆದ ನಂತರ ಕೆಲವು ನಾಯಕರು ಹಿಂದೂ ರಾಷ್ಟ್ರ, 'ಸಾಂಸ್ಕೃತಿಕ ರಾಷ್ಟ್ರೀಯತೆ' , 'ಹಿಂದೂ ಗೌರವ್' ಮುಂತಾದ

ಹೇಳಿಕೆಗಳ ಮೂಲಕ ಮತಯಾಚನೆಗೆ ಮುಂದಾದಾಗ ನಮ್ಮ ಮಧ್ಯಮವರ್ಗದಲ್ಲಿ ಮಾನವೀಯ ಸಹಜವಾದ ಯಾವುದೇ ತಲ್ಲಣ ಕಾಣಿಸಲಿಲ್ಲ. ಈ ರೀತಿಯಲ್ಲಿ ಕೋಮುಭಾವನೆಗಳಿಗೆ ಕಿಚ್ಚಿಕ್ಕುವ ಮಂದಿ ಕೆಲವರು ಇರಬಹುದು. ಅವರು 'ಅಲ್ಪಸಂಖ್ಯಾತರು'. ಘಟನೆಯ ನಂತರ ಅಂಥವರು ಮಂಗಮಾಯವಾಗುತ್ತಾರೆ. ಆದರೆ ಈ 'ಅಲ್ಪಸಂಖ್ಯಾತರೇ' ಬಹುಸಂಖ್ಯಾತರೇನೋ ಎಂಬ ಭಾವನೆ ಮಧ್ಯಮವರ್ಗದಲ್ಲಿ (The Great Indian middle class) ದಟ್ಟವಾಗಿದೆ.

ಈ ಎಲ್ಲ ಹಿನ್ನೆಲೆಯಲ್ಲಿ ಮಿಸೆಸ್. ಅಯ್ಯರ್‌ಳಲ್ಲಿ ಕಾಣಿಸುವ ದ್ವಂದ್ವ ನಾವು (ಇಲ್ಲಿ ನಾವು ಎನ್ನುವುದರ ಅರ್ಥ, ಶಿಕ್ಷಿತ ಮೇಲ್ಜಾತಿ ಮಂದಿ ಹಾಗೂ ಮಿಸೆಸ್ ಅಯ್ಯರ್ ಸೇರಿದ ಹಿಂದೂ ಮಧ್ಯಮವರ್ಗ) ಎದುರಿಸುತ್ತಿರುವ ಸಮಸ್ಯೆಯನ್ನು ಸ್ಪಷ್ಟವಾಗಿ ಬಿಂಬಿಸುತ್ತದೆ ಎನ್ನುವುದರಲ್ಲಿ ಯಾವುದೇ ಸಂದೇಹವಿಲ್ಲ. ನಾವೂ ಕೂಡ ತೀರಾ ಆತಂಕದ ಕ್ಷಣಗಳಲ್ಲಿ 'ನಮ್ಮೊಳಗು' ನಮ್ಮನ್ನು ಪ್ರಶ್ನಿಸಿದಾಗ, ಈ ಫ್ಯಾಸಿಸ್ಟ್ ಶಕ್ತಿಗಳನ್ನು ವಿರೋಧಿಸುತ್ತೇವೆ. ಹಾಗಾಗೇ ಈಗಲೂ ನನ್ನನ್ನು ಕಾಡುತ್ತಿರುವ ಪ್ರಶ್ನೆ ಮಿಸೆಸ್. ಅಯ್ಯರ್ ರಾಜಾನನ್ನು ರಕ್ಷಿಸಲು ನಾನು ಕೊಟ್ಟ ಎರಡು ಕಾರಣಗಳ ಪೈಕಿ ಯಾವುದನ್ನು ಆಯ್ಕೆ ಮಾಡಿಕೊಳ್ಳುತ್ತೇವೆ ಎಂಬುದು. ಅಂಥ ಸಂದರ್ಭಗಳಲ್ಲಿ ನಮ್ಮ ನಿಲುವು ನಿಜವಾದ ಮಾನವೀಯ ಕಾಳಜಿಯಾಗಿರುವುದು ಎಷ್ಟರ ಮಟ್ಟಿಗೆ ಸತ್ಯ? (ನಿಷ್ಕಾರುಣವಾಗಿ ಯಾರನ್ನು ಯಾರೂ ರಕ್ಷಿಸಿಲ್ಲ ಎಂದು ನನ್ನ ವಾದವಲ್ಲ. ಆದರೆ ಸಾರ್ವತ್ರೀಕರಣವಾದ ದೃಷ್ಟಿಯಲ್ಲಿ ಅಂಥದ್ದು ಬೆರಳೆಣಿಕೆಯಷ್ಟು.) ಈ ಪ್ರಶ್ನೆಗೆ ಉತ್ತರಿಸಲು ನನಗೇ ನಿಜವಾಗಿ ಭಯವಾಗುತ್ತದೆ.

ಇಂದಿನ ಸಂದರ್ಭದಲ್ಲಿ 'ಧರ್ಮನಿರಪೇಕ್ಷತೆ', 'ಸಹನೆ', 'ಮಾನವ ಹಕ್ಕುಗಳು' ಮುಂತಾದ ಪದಗಳನ್ನು ಬರೆಯಲೂ ಭಯವಾಗುತ್ತದೆ. ಇವುಗಳಿಗೆ ಸಂಘ ಪರಿವಾರ ತನ್ನದೇ ಆದ ಅರ್ಥಗಳನ್ನು ಸೃಷ್ಟಿಸಿ ಬಿಟ್ಟಿದೆ. ಸಂಘ ಪರಿವಾರವನ್ನು ಬೆಂಬಲಿಸದ ಬುದ್ಧಿಜೀವಿಗಳೂ ಕೂಡ ಈ 'ಆಲೋಚನೆ'ಗಳೇ ಪಾಶ್ಚಿಮಾತ್ಯರಿಂದ ಕಡ ಪಡೆದುಕೊಂಡದ್ದೆಂದು ವಾದಿಸತೊಡಗಿದ್ದಾರೆ. ಈ ಪದಗಳ ಬಳಕೆ 'ದೇಶ ವಿರೋಧಿ' ಅಲ್ಲದಿದ್ದರೂ ಇದರ ಬಳಕೆ ಪೆದ್ದುತನದ ಸಂಕೇತವಾಗಿ ಕಂಡರೂ ತಪ್ಪಲ್ಲ. (ಇದರ ಜೊತೆಗೆ ನಮ್ಮ ಅಥವಾ ನನ್ನ Political Correctness ನ ಅಹಂನ್ನು ಮೆಚ್ಚಿಸಲು ಇಂಥ ಪದಗಳನ್ನು ಬಳಸುತ್ತಿದ್ದೇವೇನೋ ಎಂಬ ಮತ್ತೊಂದು ಭಯವೂ ಕಾಡುತ್ತದೆ). ಹಾಗಾಗಿ ನಮ್ಮೊಂದಿಗೇ ಬದುಕುತ್ತಿರುವ 'ಸಹ ಜೀವಿಗಳ' ಬೆಂಬಲಕ್ಕೆ ನಿಲ್ಲಲಾರದಂಥ ಸ್ಥಿತಿಗೆ ನಾವು ಬಂದು ತಲುಪಿದ್ದೇವೆ. ಅವರು ಅವರ ಧರ್ಮ ಮತ್ತು ಸಂಸ್ಕೃತಿಯನ್ನು ಆಶ್ರಯಿಸಿ ಬದುಕಲಿ ಎಂದು ಹೇಳುವುದೂ ಕೂಡ ಕಷ್ಟವಾಗುವಂಥ ಪರಿಸ್ಥಿತಿ ನಿರ್ಮಾಣವಾಗಿದೆ. ಇನ್ನೊಂದು ಧರ್ಮದವರ ಸಹಬಾಳ್ವೆ ಅಸಹನೀಯ ಎನ್ನುವಂಥ ಸ್ಥಿತಿಗೆ ನಾವು ಇಂದು ತಲುಪಿದ್ದೇವೆ. 'ಹಿಂದುತ್ವ' - ಇಂದು Cultural Nationalism ಎಂಬ ಹೊಸ 'ಅರ್ಥ' ದೊಂದಿಗೆ ಬಳಕೆಯಾಗುತ್ತಿದೆ. ಪ್ರಜಾಪ್ರಭುತ್ವದ ಮೂಲ ತತ್ವಗಳು ಅರ್ಥ ಕಳೆದುಕೊಳ್ಳುತ್ತಿವೆ. ಹಾಗಾಗಿ ನಮ್ಮ ಆಯ್ಕೆ ಮಿಸೆಸ್. ಆಯ್ಯರ್‌ಳ ಎರಡನೇ ಆಯ್ಕೆಗೆ ಹೆಚ್ಚು ಹೊಂದಾಣಿಕೆಯಾಗುತ್ತಿದೆ. ನಮ್ಮ ಸಹಜೀವಿಗಳ ಬೆಂಬಲಕ್ಕೆ ನಿಲ್ಲುವುದರ



'ಲಾಭ'ವನ್ನು ಲೆಕ್ಕ ಹಾಕುವಂಥ ಸ್ಥಿತಿ ನಮ್ಮದಾಗಿದೆ. ನಮ್ಮ ಎಲ್ಲ ಭಾವುಕತೆಯನ್ನೇ ಮಾರುಕಟ್ಟೆ ಸಂಸ್ಕೃತಿಯ ಹಿನ್ನೆಲೆಯಲ್ಲಿ ಆರ್ಥಿಕ ಉದಾರೀಕರಣದ ಮೂಲಕ ನೋಡಬೇಕಾದ ಅನಿವಾರ್ಯತೆ ಎದುರಾಗಿದೆ.

ಕೋಮುಗಲಭೆಗಳಿಂದ ದೇಶದ ಆರ್ಥಿಕ ವ್ಯವಸ್ಥೆಗೆ ಧಕ್ಕೆಯಾಗುತ್ತದೆ. ಕೊಲೆ ಮತ್ತು ಮಾನ ಭಂಗಗಳಿಂದ ದೇಶದ ಬೊಕ್ಕಸಕ್ಕೆ ನಷ್ಟವಾಗುತ್ತದೆ. ಕೋಮುಗಲಭೆಗಳಿಂದ ದೇಶದ ಅಭಿವೃದ್ಧಿ ಕುಂಠಿತ ವಾಗುತ್ತದೆ. ವಿಶ್ವ ವ್ಯಾಪಾರ ಸಂಘದೊಂದಿಗೆ ವ್ಯಾಪಾರ-ವ್ಯವಹಾರ ಕುದುರಿಸಲು ತೊಂದರೆ ಯಾಗುತ್ತದೆ ಎಂಬ ನಂಬಿಕೆ ಚಾರ್ಟ್ಸ್, ಗ್ರಾಫ್ಸ್ ಚಿತ್ರಗಳು, ಎಕ್ಸಿಕ್ಯೂಟೀವ್ ಸಮ್ಮರಿಗಳು, ಇಂದು ಮಾನವೀಯ ಘನತೆ ಮತ್ತು ನ್ಯಾಯದ ಜಾಗವನ್ನು ಆಕ್ರಮಿಸಿಕೊಂಡು ಕೂತಿವೆ.

ಈ ಹಿನ್ನೆಲೆಯಲ್ಲಿಯೇ ಮಿಸೆಸ್. ಅಯ್ಯರ್‌ಗೆ ತನ್ನ ದೀರ್ಘ ಕಷ್ಟಕರ ಪ್ರಯಾಣವನ್ನು ಪೂರ್ಣ ಗೊಳಿಸಲು ಮಿಸ್ಟರ್ ಅಯ್ಯರ್ ನೆರವು ಬೇಕಾಯಿತೇ? ಎಂಬ ಪ್ರಶ್ನೆ ನನ್ನನ್ನು ಕಾಡಿದ್ದು.

ಪ್ರಶ್ನೆ ಕ್ಲಿಷ್ಟ.

ಉತ್ತರವೂ ಕ್ಲಿಷ್ಟ. ಆದರೆ ನನ್ನ ಮಟ್ಟಿಗಂತೂ ಸ್ವೀಕಾರಾರ್ಹ.

●

---

ಪರಸಂಗ ಐತೆ

# ತಿಣುಕಿದನು ರಾಯ

ಒಬ್ಬ ರಾಜ ಇದ್ದ. ಕಂಡದ್ದೆಲ್ಲ ತನಗೇ ಬೇಕು ಎನ್ನುತ್ತಿದ್ದ. ಒಂದು ದಿನ ಒಬ್ಬ ಮುದುಕಿಯ ಗುಡಿಸಲನ್ನು ನೋಡಿದ. 'ಇಲ್ಲಿ ಒಂದು ಚಿಕ್ಕ ಅರಮನೆ ಕಟ್ಟಿಕೊಂಡು, ಅದರ ಸುತ್ತ ತೋಟ ಮಾಡಿಕೊಂಡರೆ ಚೆನ್ನಾಗಿರುತ್ತೆ' ಎಂದುಕೊಂಡ.

ಮುದುಕಿಯನ್ನು ಕರೆಸಿದ. 'ಇದನ್ನು ನನಗೆ ಮಾರಿಬಿಡು' ಎಂದ. ಮುದಕಿ ಮಾರಲು ಒಪ್ಪಲಿಲ್ಲ. ದೊರೆ 'ಸಾವಿರ ಕೊಡುತ್ತೇನೆ' ಎಂದ. ಹತ್ತು ಸಾವಿರ, ಎಂದ. ಐವತ್ತು ಎಂದ. ಲಕ್ಷ ಎಂದ.

'ನಾನು ನೆಮ್ಮದಿಯಾಗಿ ವಾಸ ಮಾಡಬೇಕು ಎಂದು ಹಿರಿಯರು ನನಗೆ ಕೊಟ್ಟದ್ದು ಈ ಭೂಮಿ. ಈ ಗುಡಿಸಿಲು, ಹಣಕ್ಕಾಗಿ ನಾನು ಇದನ್ನು ಮಾರಿಕೊಂಡರೆ ದೇವರು ಮೆಚ್ಚುವನೆ?' ಎಂದಳು ಮುದುಕಿ.

ದೊರೆಗೆ ಕೋಪ ಬಂತು. 'ಎಲಾ ಇವಳ ಪೊಗರೆ!' ಎಂದು ಆ ಮುದುಕಿಯನ್ನು ಅಲ್ಲಿಂದ ಓಡಿಸಿ, ಆ ಸ್ಥಳವನ್ನು ಆಕ್ರಮಿಸಿಕೊಂಡ. 'ಇಲ್ಲಿ ಒಂದು ಚಿಕ್ಕ ಅರಮನೆ, ಅದರ ಸುತ್ತ ಉದ್ಯಾನವನ ನಿರ್ಮಾಣವಾಗಲಿ' ಎಂದ.

ಮುದುಕಿ ರಾಜಪುರೋಹಿತನ ಹತ್ತಿರ ಹೋಗಿ, ದೊರೆ ತನಗೆ ಮಾಡಿದ ಅನ್ಯಾಯವನ್ನು ಹೇಳಿಕೊಂಡಳು. 'ಸ್ವಲ್ಪ ತಾಳು, ತಾಯಿ. ನಿನ್ನ ಭೂಮಿಯನ್ನು ಕೊಡಿಸುತ್ತೇನೆ' ಎಂದು ರಾಜಪುರೋಹಿತ ಅವಳನ್ನು ತನ್ನ ಮನೆಯಲ್ಲಿ ಇರ ಹೇಳಿದ.

ಕಾಲಕ್ರಮದಲ್ಲಿ ರಾಜ ಬಯಸಿದ್ದ ಅರಮನೆ, ತೋಟ ನಿರ್ಮಾಣವಾದುವು. ಗೃಹಪ್ರವೇಶದ ದಿನ ಪುರೋಹಿತ ನಾಲ್ಕು ಕತ್ತೆಗಳನ್ನು ಅಲ್ಲಿಗೆ ಕರೆದುಕೊಂಡು ಹೋದ. 'ಈ ಭೂಮಿಯಿಂದ ನಾಲ್ಕು ಚೀಲ ಮಣ್ಣು ನನಗೆ ದಯಪಾಲಿಸಬೇಕು' ಎಂದ.

ದೊರೆ ದಯಪಾಲಿಸಿದ. 'ಇದರಲ್ಲಿ ಒಂದು ಚೀಲವನ್ನು ಎತ್ತಿ ಈ ಕತ್ತೆಯ ಮೇಲೆ ಇರಿಸಿ, ಪ್ರಭುವೆ' ಎಂದ ಪುರೋಹಿತ.

ದೊರೆ ತಿಣುಕಿದ. ಚೀಲವನ್ನು ಎತ್ತಲಾಗಲಿಲ್ಲ.

'ಒಂದು ಮೂಟೆ ಭೂಮಿಯನ್ನು ಹೊರಲಾರದ ನೀನು, ದೇವರು ಕರೆದಾಗ ಈ ಇಡೀ ಭೂಮಿಯನ್ನು ಹೇಗೆ ತಾನೆ ಹೊತ್ತುಕೊಂಡು ಹೋಗುತ್ತೀಯೆ?' ಎಂದ ಪುರೋಹಿತ.

ದೊರೆಗೆ ನಾಚಿಕೆಯಾಯಿತು. ಮುದುಕಿಯ ಕ್ಷಮೆ ಬೇಡಿ, ಆ ಅರಮನೆಯನ್ನು, ತೋಟವನ್ನು ಅವಳಿಗೇ ಕೊಟ್ಟುಬಿಟ್ಟ.

●

# ಕವಿಗೆ ಪ್ರೀತಿಯ ಕನವರಿಕೆ ಯಾಕೆ?

ಪ್ರೀತಿಯೆಂಬುದೊಂದು ನಿರಂತರ ಕಾವ್ಯ. ಕವಿಯೂ ಅಲ್ಲಿಂದಲೇ ನಡಿಗೆ ಆರಂಭಿಸಿ ನಡುವೆಯೆಲ್ಲೋ ಹೊರಳಿದರೂ ಮತ್ತೆ ಮತ್ತೆ ಅದೇ ಬಿಂದುವಿಗೆ ಮರಳುವುದಿದೆ-ಚೈತನ್ಯವನ್ನು ತುಂಬಿಸಿಕೊಳ್ಳಲೇನೋ ಎಂಬಂತೆ.
ಕವಿಗೆ ಯಾಕೆ ಪ್ರೀತಿಯ ಕನವರಿಕೆ ಹೆಚ್ಚು? ಇಂಥದೊಂದು ಪ್ರಶ್ನೆಯನ್ನು 'ಹಂಗಾಮ' ದ ಪರವಾಗಿ ವಿಜಯಕಾಂತ ಪಾಟೀಲ ಐವರು ಯುವಕವಿಗಳ ಮುಂದೆ ಇಟ್ಟಾಗ ಐವರು ಪ್ರತಿಕ್ರಿಯಿಸಿದ್ದು ಇಲ್ಲಿದೆ :

---

## ❑ ಆನಂದ ಋಗ್ವೇದಿ



**ಕ**ವಿ ಸದಾ ಭಾವುಕ ಸೆಲೆಯಲ್ಲಿ, ರಮ್ಯದಾರಿಯಲ್ಲಿ ನಡೆವ ಪಥಿಕ. ಆ ದಾರಿಯಲ್ಲಿ ಆತನನ್ನು ಸೆಳೆದೊಯ್ಯುವುದು ಒಂದು ಮೋಹ. ಅದು ಮೋಹಕ ವಾದ ವಿಭ್ರಮೆಯಂತಹದು. ಅದು ಪ್ರೀತಿಯ ಹುಚ್ಚು. ಆತನ ಈ ಪ್ರೀತಿ ಕೇವಲ ಹೆಣ್ಣಿಗೆ ಸಂಬಂಧಿಸಿದ್ದಲ್ಲ. ಮೋಹ ಬರಿಯೇ ಪ್ರೇಮವೇನಲ್ಲ. ತನ್ನ ಮೈ ಮರೆಸುವ, ಭಾವುಕ ಸೆಲೆಯಲ್ಲಿ ಹುಚ್ಚು ಹೊಳೆಯಲ್ಲಿ ಮೀಯಿಸಬಲ್ಲ ಆ ಸೆಳೆತಕ್ಕೆ ಯಾವತ್ತೂ ಮನುಷ್ಯರಿಗಿಂತ ಹೆಚ್ಚು ಮುಗ್ಧವಾಗಿ, ಬೆರಗಿನಲ್ಲಿ ತೆರೆದುಕೊಳ್ಳಬಲ್ಲವ- ಕವಿ. ಆತ ಆ ಸೆಳೆತದಲ್ಲಿ ಈಸಾಡುತ್ತಾನೆ. ಸೆಳೆತದ ದಿಕ್ಕನಲ್ಲೇ ತೇಲಿ ಹೋಗಿ ಬಿಡುತ್ತಾನೆ. ಮನುಷ್ಯ ಮನುಷ್ಯನ ಹಾಗೆ ಕಾಣಸುವ ಆ ಪ್ರೀತಿಯ ಸ್ಥಿತಿ ಕವಿಯ ಪಾಲಿಗೆ ದೈವಿಕವಾದುದು. ಹಾಗೆಂದೇ ವೈಚಾರಿಕ ಸೆಲೆಯ ವಿಮರ್ಶಕನಿಗಿಂತ, ಪಾತ್ರಗಳ ಸಂತೆಯ ಕತೆಗಾರನಿಗಿಂತ ಭಾವುಕ ಕವಿಗೇ ಈ ಪ್ರೀತಿಯ ಸೆಳೆತ, ಹುಚ್ಚು ಹೆಚ್ಚು.

*ಮುಚ್ಚಿದ ರೆಪ್ಪೆಗಳ ಅರೆ ತೆರೆದು*
*ಅರೆ ನಿಮೀಲಿತ ನೇತ್ರಗಳಲ್ಲಿ*
*ಕನಸ ಪರದೆ ಬಿಚ್ಚಿಡುತ್ತದೆ ಪ್ರೀತಿ*
*ನಗುವ ನಕ್ಷತ್ರಗಳಿಗೂ ನಾಚಿಕೆ,*
*ಚಂದ್ರನಿಗೂ ಲಜ್ಜೆಯ ಅಮವಾಸ್ಯೆ.*

## ❑ ಡಾ. ಗೀತಾ ವಸಂತ



ಪ್ರತಿಮೆಗಳಿಗೆ ಅತೀತವಾಗಿ ನಿತ್ಯ ನೂತನವಾಗಿ ಉಳಿದುಬಿಡುತ್ತದೆ. ಅದನ್ನು ಮುಟ್ಟುವ ಕನವರಿಕೆಯನ್ನು ಎದೆಯಲ್ಲಿ ಉಳಿಸಿ ಬಿಡುತ್ತದೆ. ಪ್ರೀತಿಯೆಂಬುದು ಅಣುವಾಗಿ ಹುಟ್ಟಿ, ಒಳಗೆಲ್ಲ ವ್ಯಾಪಿಸಿ ತನ್ನ ತೆಕ್ಕೆಯೊಳಗೆ ನಮ್ಮನ್ನೇ ಕರಗಿಸಿಬಿಡುವ ಮಾಯೆ.

ಕವಿಗೆ ಅಂಥ 'ಕರಗುವಿಕೆ' ಬೇಕು. ಭಗವಂತನ ಮುಂದೆ ಕರಗುವ ಭಕ್ತನಂತೆ, ಹಾಲಲ್ಲಿ ಕರಗುವ ಕಲ್ಲುಸಕ್ಕರೆಯಂತೆ, ಅಪಾರ ಅವ್ಯಕ್ತದ ಮುಂದೆ... ಅನಂತ ವಿಸ್ತಾರದ ಮುಂದೆ... ಹಾಗೇ ಪ್ರೀತಿಯ ಮುಂದೆ ಕರಗುವುದು, ಮುಂದೆ ಪ್ರೀತಿಯೇ ತಾನಾಗಿ ಜಗತ್ತನ್ನು ಹೊಸದಾಗಿ ಕಾಣುವುದು... ಕವಿಯ ನಿರಂತರ ಕನವರಿಕೆ.

ಪ್ರೀತಿಯಿಂದ
ಎದೆಯ ಒರತೆಯ ಕಾಪಿಟ್ಟರೆ
ಇಮ್ಮಡಿಸಿ ನೂರ್ಮಡಿಸಿ ಕಡಲಾಯಿತು...

## ❑ ಎಂ.ಡಿ. ವಕ್ಕುಂದ



ಪ್ರೀತಿ ಅಂದರೆ ಏನು? ಅವ್ವನ ಎದೆಯ ಹಾಲೇ? ಬೆಚ್ಚನೆಯ ಮಡಿಲೇ? ಕೈಯ ತುತ್ತೇ ಕಣ್ಣೀರ ಒರತೆಯೇ? ಅಪ್ಪನ ಹೆಗಲ ರಥವೇ? ತೋಳ ತೆಕ್ಕೆಯೇ? ತಾನು ಹರಕು ಲಂಡಂಗಿಯನ್ನು ಉಟ್ಟು ನನ್ನ ಮೈತುಂಬ ತೊಡಿಸಿದ ಆ ಬಣ್ಣದ ಅಂಗಿಯೇ?

ಪ್ರೀತಿ ಅಂದರೆ ಏನು? ನಲ್ಲೆ ಮೊದಲ ನೋಟದಲ್ಲೇ ಎದೆಗಿಟ್ಟ ಕೊಳ್ಳಿಯೇ? ನಿದ್ದೆಗೇಡಿ ರಾತ್ರಿಗಳ ಧ್ಯಾನಸ್ಥ ಹಳವಂಡಗಳೇ? ಮೊದಲ ಮುತ್ತಿನ ಉನ್ಮಾದ ಲಜ್ಜೆಗಳೇ? ಜೀವವೆರಡರ ಮಿಲನವೇ? ಎರಡು ದಡಗಳ ನಡುವೆ ತುಂಬಿ ಹರಿವ ಹೊಳೆಯೇ?

ಪ್ರೀತಿಯೆಂದರೆ ಹತ್ತೂ ನಿಟ್ಟಿನಿಂದ ಅಕ್ಕರೆಯ ಒಡಲುಗಳಿಂದ ಹರಿದು ಬರುವ ವಾತ್ಸಲ್ಯದ ಬೆಳದಿಂಗಳೇ? ಬದುಕ ಹೊಡೆತಗಳಿಂದ ತತ್ತರಿಸಿ ಹೋದಾಗ ಒಂಟಿತನ ಕವಿದಾಗ ಬೆನ್ನು ಸವರುವ ಮೃದು ಹಸ್ತಗಳ ಸ್ಪರ್ಶವೇ?

ಪ್ರೀತಿಯೆಂದರೆ ನೊಂದವರ ಬೆಂದವರ ಎದೆಯ ಭಾವಕ್ಕೆ ಮಿಡಿವ ನಾಡಿಯೇ? ಒಸರುವ ಕಣ್ಣೀರೇ? ತುಳಿವ ಕಾಲ್ಗಳ ಕಂಡು ಕೆರಳುವ ಸರ್ಪವೇ? ಮಾನವೀಯ ಬದುಕಿನ ಸುಂದರ ಕನಸೇ?

ಹೌದು, ಪ್ರೀತಿಯೆಂದರೆ ಈ ಎಲ್ಲವೂ ಮತ್ತು ಇನ್ನೂ ಬಹಳಷ್ಟು..... ಹೀಗಾಗಿ, ಕವಿಗೆ 'ಪ್ರೀತಿ'ಯ ಕನವರಿಕೆಯೇ ಹೆಚ್ಚು.

ನಿನ್ನ ಕಣ್ಣೊಳಗೊಂದು ದೀಪವಿದೆ
ನನ್ನ ಸಣ್ಣತನಗಳನ್ನು ಸುಟ್ಟುಬಿಡು
ನಿನ್ನ ಎದೆಯೊಳಗೊಂದು ಒರತೆಯಿದೆ
ನನ್ನ ಪಾಪಗಳನ್ನು ತೊಳೆದು ಬಿಡು.

## ❑ ರೂಪ ಹಾಸನ



ಸಾಮಾನ್ಯ ವ್ಯಕ್ತಿಗಳಿಗಿಂತ ಕವಿ ಹೆಚ್ಚು ಭಾವಜೀವಿ. ಅವನ ಸಂವೇದನೆ, ಭಾವ ತೀವ್ರತೆ, ಉದ್ವೇಗ, ಕುತೂಹಲ ಎಲ್ಲವೂ ತೀವ್ರವಾಗಿದ್ದು ಅವನನ್ನು ಹೆಚ್ಚು ವಿಶಿಷ್ಟನನ್ನಾಗಿಸುತ್ತದೆ. ಹೀಗೆಂದೇ ಎಲ್ಲ ಭಾವಗಳೂ ಇತರರಿಗಿಂತ ಅವನನ್ನು ಹೆಚ್ಚು ಕಾಡುತ್ತವೆ.

ಪ್ರೀತಿಯೊಂದು ವಿಶಿಷ್ಟ ಶಕ್ತಿ. ಶತಶತಮಾನಗಳಿಂದ ಒಳಿತಿನೆಡೆಗೆ ಸದಾ ಸಮಾಜವನ್ನು ನಡೆಸಲು ಪ್ರಯತ್ನಿಸುತ್ತಿರುವ ಕವಿಗೆ ಸಹಜವಾಗಿ 'ಪ್ರೀತಿ'ಯ ಕನವರಿಕೆಯೇ ಹೆಚ್ಚು.

*ಕಣ್ಣಂಚಿನ ಚಿಕ್ಕ ಹನಿಯನ್ನು*
*ಆಕಾಶದೆತ್ತರದ ಪ್ರೀತಿ*
*ಮೆಲ್ಲ ಮೆಲ್ಲಗೆ ಹೀರಿ*
*ಮುಗುಳು ನಗೆ ನಗುತ್ತದೆ*
*ಎಂದಿಗೂ ಯಾರಿಗೂ*
*ಸೋಲದ ಕಣ್ಣಂಚಿನ ಹನಿ*
*ಪ್ರೀತಿಗೇಕೆ ಸೋಲುತ್ತದೆ?*

## ❑ ದೀಪಾ ಹಿರಗುತ್ತಿ



ಪ್ರತಿ ವ್ಯಕ್ತಿಯೂ ಪ್ರೀತಿಸಲು ಇಷ್ಟಪಡುತ್ತಾನೆ; ಪ್ರೀತಿಸಲ್ಪಡಲು ಇಷ್ಟಪಡುತ್ತಾನೆ. ಪ್ರತಿಯೊಬ್ಬರೂ 'ಪ್ರೀತಿ'ಯನ್ನು 'ಪ್ರೀತಿ'ಸುತ್ತಾರೆ; ಇಷ್ಟಪಡುತ್ತಾರೆ. ಕವಿಯಾದವನು ಕವಿಯಾಗುವುದಕ್ಕೂ ಮೊದಲು ವ್ಯಕ್ತಿಯಾಗಿರುವುದರಿಂದ ಆತನಿಗೂ 'ಪ್ರೀತಿ'ಯ ಕನವರಿಕೆಯೇ ಹೆಚ್ಚು ಮೆಚ್ಚು, ಅದು ಸ್ವಾಭಾವಿಕ.

*ಮೌನದ ಸಾಥ್ ಇಲ್ಲದೆ*
*ಮಾತಿಗೆಲ್ಲಿದೆ ಅರ್ಥ?*
*ಮೌನ ಸಂಭಾಷಣೆಯಲ್ಲೋ*
*ಮಾತಿನ ಹಂಗಿರದ ನೂರರ್ಥ.*
*ನಿಜ, ಮಾತು ಮೋಹ*
*ಮೌನ ಪ್ರೀತಿ.*

●

# ತಂತ್ರಜ್ಞಾನದ ಎದುರು ಹಳ್ಳಿಗಾಡಿನವರು

❑ ಮೊಗಳ್ಳಿ ಗಣೇಶ್

ಜಗತ್ತು ಯಾವಾಗಲೂ ನಿರ್ದಯವಾಗಿರುತ್ತದೆ. ಒಂದಿಷ್ಟು ಅರ್ಜಿಗಳನ್ನು ಒಟ್ಟು ಹಾಕಿ ಕೆಲವರನ್ನು ಮಾತ್ರ ಕ್ರೂರವಾಗಿ ಆಯ್ದುಕೊಳ್ಳುತ್ತದೆ. ಈ ರೀತಿ ಸಾರಾಸಗಟಾಗಿ ನಿರಾಕರಿಸುವ ಜಗತ್ತಿಗೆ ಎದುರು ಸಿಕ್ಕಿರುವವರು ನಾವು, ಹಳ್ಳಿಯಿಂದ ಬಂದವರು. ಅತ್ಯಂತ ಚಿಕ್ಕ ಗ್ರಾಮದ ಕಿರು ಓಣಿಯಿಂದ ಬಂದು, ಪೇಟೆಯ ವಿಶಾಲ ರಸ್ತೆ ಮೂಲಕ ಮಾಹಿತಿ ತಂತ್ರಜ್ಞಾನದ ಎದುರು ನಮ್ಮಂಥವರು ದಿಗ್ಭ್ರಾಂತರಾಗಿ ನಿಂತಿದ್ದೇವೆ. 'ಜಗತ್ತು', 'ವಿಶ್ವ' ಎಂಬ 'ವಿಶಾಲ' ಪರಿಸರ ನಮ್ಮನ್ನು ಕಂಗೆಡಿಸಿದೆ.

ಈ ಸಮಾಜದಲ್ಲೆರಡು ವರ್ಗ. ಒಂದು ತಿಳಿದವರ, ಅಂದರೆ ಐಟಿ ಎಂಬ ಮಾಹಿತಿಯುಗ ತಿಳಿದವರ ವರ್ಗ; ಇನ್ನೊಂದು ಹಳ್ಳಿಯಿಂದ ಬಂದು, ಸಂಸ್ಕೃತಿ, ಸಾಹಿತ್ಯ, ಇತಿಹಾಸ ತಿಳಿದವರ ಪ್ರಪಂಚದ ಪ್ರಕಾರ 'ತಿಳಿಯದವರ' ವರ್ಗ. ಇಲ್ಲಿನ ವಿರೋಧಾಭಾಸವೆಂದರೆ ಐಟಿ ಮಂದಿ ಕೈಯ್ಯಲ್ಲಿ ಅಧಿಕಾರ ಇರುತ್ತದೆ, ಅವರು ಯಾವತ್ತೂ ಆಳುವ ವ್ಯವಸ್ಥೆ ಜತೆ ಸೇರಿಕೊಂಡಿರುತ್ತಾರೆ. ಉಳಿದವರು ಅಧಿಕಾರ ಇಲ್ಲದೆ, ಆದರ್ಶ ಕ್ರಮದಲ್ಲೇ ಉಳಿದುಬಿಡುತ್ತಾರೆ. ಇದನ್ನು ಮೀರಲು ಏನು ಮಾಡಬೇಕೆಂಬ ಪ್ರಶ್ನೆಗೆ ಗಾಂಧೀಜಿ, ಬಿ.ಆರ್.ಅಂಬೇಡ್ಕರ್, ಕುವೆಂಪು ಅವರು ಬೇರೆ ಬೇರೆ ಕಾಲದಲ್ಲಿ ನೀಡಿದ, ಒಂದೇ ಅರ್ಥ ಧ್ವನಿಸುವ ಉತ್ತರಗಳಿವೆ. ಗಾಂಧೀಜಿ, 'ಜಗತ್ತಿನ ಎಲ್ಲಾ ಜ್ಞಾನ, ವಿವೇಕಗಳು ನನ್ನ ಮನೆ ಬಾಗಿಲಿಗೆ ಬರಲಿ. ಆದರೆ ಅದು ನನ್ನ ಮನೆ, ಮಾಡು, ಕಾರ್ಯಗಳನ್ನು ಉರುಳಿಸದಿರಲಿ' ಎಂದರು. ಅಂಬೇಡ್ಕರ್ 'ವಸಾಹತುಶಾಹಿ ಜಗತ್ತು ನನ್ನ ಮುಟ್ಟಿಸಿ ಕೊಳ್ಳದಿದ್ದರೆ, ಇಂಗ್ಲಿಷ್ ಶಿಕ್ಷಣಕ್ಕೆ ತೆರೆದುಕೊಳ್ಳದಿದ್ದರೆ ಇಡೀ ಜಗತ್ತಿಗೆ ಈ ದೇಶದ ಮುಟ್ಟಿಸಿಕೊಳ್ಳದವರ ಸಂಕಟವನ್ನು ನನಗೆ ಹೇಳಲಾಗುತ್ತಿರಲಿಲ್ಲ' ಎಂದರು. ಕುವೆಂಪು, 'ಇಂಗ್ಲಿಷ್ ಕಲಿಯದಿದ್ದರೆ, ಜಗದ ಜತೆ ಅನುಸಂಧಾನಕ್ಕಿಳಿಯದಿದ್ದರೆ ನಾನು, ಯಾವುದೋ ಗೌಡರ, ಊಳಿಗರ ನಿರ್ದಿಷ್ಟ ಜೀವನ ಕ್ರಮದಲ್ಲಿ ಕಳೆದುಹೋಗುತ್ತಿದ್ದೆ' ಎಂದರು.

ಅಂದರೆ ನಾವು ಹೊಸಕಾಲದ ಸವಾಲುಗಳನ್ನು ಎದುರಿಸಲು ಡಾರ್ವಿನ್ನನ 'ವಿಕಾಸವಾದ' ತತ್ವವನ್ನು ಇನ್ನೊಮ್ಮೆ ನೆನಪಿಸಿಕೊಳ್ಳಬೇಕು. ಆ ತತ್ವ, 'ಯಾವುದು ತನ್ನ ಪರಿಸರದೊಂದಿಗೆ ಅತ್ಯುತ್ತಮ ಹೊಂದಾಣಿಕೆ ಮಾಡಿಕೊಳ್ಳುತ್ತದೋ ಅದು ಬದುಕುಳಿಯುತ್ತದೆ'. ಈ ಹೊಂದಾಣಿಕೆ ನಿಸರ್ಗದ ಜೈವಿಕ ಸರಪಳಿಯ ಹಾಗೆ. ಎಲ್ಲರೊಳಗಿದ್ದೂ, ಎಲ್ಲರಿಗಿಂತ ಭಿನ್ನ ನೆಲೆಯನ್ನು ಹುಡುಕಿಕೊಳ್ಳುವುದು. ಕುವೆಂಪು, ಗಾಂಧೀಜಿ ಕೂಡಾ ಇದೇ ಅರ್ಥದಲ್ಲಿ ಮೇಲಿನ ಮಾತನಾಡಿರುವುದು.

ಹಾಗಾದರೆ ಸವಾಲು ಎದುರಿಸುವ ಬಗೆ ಎಂತು? ನಾವು ಮತ್ತೆ ನಮ್ಮ ಸಂಸ್ಕೃತಿಗೆ ಮರಳುವುದು. ನಮ್ಮಜ್ಜಿ ಹೇಳುತ್ತಿದ್ದ ರಾಜ ರಾಣಿಯರ ಸಾಮಾನ್ಯ ಕತೆ ಟಾಲ್‌ಸ್ಟಾಯ್ ಕತೆಗೇನೂ ಕಡಿಮೆ ಇಲ್ಲ. ಶೇಕ್ಸ್‌ಪಿಯರ್ ನಾಟಕಗಳ ಮೂಲ ದ್ರವ್ಯ ಜನಪದ ಕತೆ, ಪುರಾಣ. ಜಗತ್ತಿನ ಎಲ್ಲಾ ದೊಡ್ಡ ಲೇಖಕರು ಮೊರೆ ಹೋಗಿದ್ದು ಹಳೆಕಾಲದ ಜನಪದ ಕತೆ, ಪುರಾಣಗಳಿಗೆ. ಮಾಸ್ತಿ ಕತೆ ಕಟ್ಟುವುದನ್ನು ಕಲಿತಿದ್ದು ನಮ್ಮ ಜನಪದದಿಂದ. ಹೊಸ ಜಗತ್ತಿನ ಸ್ಪರ್ಧೆಗೆ, ಸವಾಲಿಗೆ ಎದುರು ನಿಲ್ಲುವುದಕ್ಕೆ ಗ್ರಾಮೀಣ ಜಗತ್ತಿಂದ ಬಂದ ಪ್ರತಿಯೊಬ್ಬರೂ ಅರ್ಹರು. ಅದು ಹೇಗೆಂಬುದನ್ನು ಕುವೆಂಪು ನಿಖರವಾಗಿ ತೋರಿಸಿದ್ದಾರೆ. ಏಕಲವ್ಯ ಕುವೆಂಪು ಅವರಿಗೆ, ಬಹುದೊಡ್ಡ

ಸಾಧ್ಯತೆ. ಒಬ್ಬ ಗಾಂಢೀವಿ ಅರ್ಜುನನೆಂಬ 'ತಿಳಿದ' ಜಗತ್ತಿನ ಎದುರು, ಆಸ್ಥಾನದಲ್ಲಿ ಕಲಿಯದೇ ತನ್ನ ಸ್ವಯಂ ವಿವೇಕದಿಂದ ಬಿಲ್ವಿದ್ಯೆ ಕಲಿತ ಏಕಲವ್ಯ ಶ್ರೇಷ್ಠ. ಒಬ್ಬ ಏಕಲವ್ಯ ಈ ಸಮಾಜದ ಜ್ಞಾನದ ಬೆಳಕಾಗಿ, ಅಲಕ್ಷಿತ ದನಿಗಳಿಂದೆದ್ದು ಬಂದ ಪ್ರಖರ ನ್ಯಾಯ ನಿರ್ಮಾತೃವಾಗಿ ಕಾಣುತ್ತಾನೆ. ಕುವೆಂಪು ಅವರ 'ಜಲಗಾರ' ಕೂಡಾ ಕಾವ್ಯದ ನಾಯಕನಾಗಿ, ಕನ್ನಡ ಸಾಹಿತ್ಯದಲ್ಲಿ ಚಾರಿತ್ರಿಕ ಪಲ್ಲಟವನ್ನುಂಟು ಮಾಡುವವನಾಗಿ ಕಾಣುತ್ತಾನೆ. ಇವೆಲ್ಲಾ ಗ್ರಾಮೀಣ ಪ್ರತಿಭೆಗಿರುವ ಸಾಮರ್ಥ್ಯ ಹಾಗೂ ನಮ್ಮ ಸಂಸ್ಕೃತಿಗಿರುವ ಸಾಧ್ಯತೆಯ ಪ್ರತೀಕ. ಇಡೀ ದೇಶದ ಉಸಿರಾಟ, ನರನಾಡಿ, ರಕ್ತ ಸಂಚಾರ ಇರುವುದು ಗ್ರಾಮೀಣ ಭಾರತದಲ್ಲಿ; ಅನಕ್ಷರ ಜಗತ್ತಿನ ಒಳಗೆ ಈ ದೇಶವನ್ನು ಬಿಂಬಿಸುವ ಚೈತನ್ಯವಿದೆ.

ಈಗ ನಾವು ಮಾಡಬೇಕಾಗಿರುವುದು: ಮುಂದಿನ ಹೆಜ್ಜೆ ಇಡುವುದನ್ನು ಕಲಿಯಬೇಕಾದರೆ, ಹಿಂದಿನ ಹೆಜ್ಜೆಯನ್ನು ಮೊದಲು ತಿಳಿಯುವುದು. ಅಲ್ಲಮ ಪ್ರಭು ಹೇಳುವಂತೆ, 'ಹಿಂದಣ ಹೆಜ್ಜೆಯನರಿಯದವರು ಮುಂದಣ ಹೆಜ್ಜೆಯನರಿಯರು'. ಹಳ್ಳಿಗಾಡಿನ ಜ್ಞಾನ ಜಗತ್ತನ್ನು ಮರುಸೃಷ್ಟಿ ಮಾಡಿದ ಮಾಸ್ತಿಯವರ 'ಆಧುನಿಕ ಜಗತ್ತಿನ ಜನಪದ ಕತೆ'ಗಳ ಬಗ್ಗೆ, ತಮ್ಮೆರಡು ಕಾದಂಬರಿಗಳಲ್ಲಿ ಗ್ರಾಮ್ಯ ಜಗತ್ತು ಕಟ್ಟಿಕೊಟ್ಟ ಕುವೆಂಪು ಬಗ್ಗೆ.... ಹೀಗೆ ಪೂರ್ವಿಕರ ಬಗ್ಗೆ, ಪೂರ್ವ ಸಾಹಿತ್ಯದ ಬಗ್ಗೆ ತಿಳಿಯಬೇಕು. ಹಳೆ ಕಾಲದ ತಿಳಿವಳಿಕೆಯನ್ನು ಹೊಸ ಕಾಲಕ್ಕೆ ತಕ್ಕಂತೆ ಪರಿಷ್ಕರಣೆ ಮಾಡಿಕೊಂಡು ಎಚ್ಚರಿಕೆಯಿಂದ ಬಳಸಿಕೊಳ್ಳಬೇಕು.

ಸಿದ್ಧಲಿಂಗಯ್ಯ ಸೃಷ್ಟಿಸಿದ ಕವಿತೆಗಳು ಅಡಿಗರ ಕಾವ್ಯಕ್ಕಿಂತ ಮುಖ್ಯ ಎಂದೇಕೆ ಅನಿಸುತ್ತದೆ? ದೇವನೂರು ಮಹಾದೇವರ ಕತೆಗಳು ಅಷ್ಟು ಪ್ರಧಾನವೆಂದೇಕೆ ಆಗುತ್ತದೆ? ಸಾಹಿತ್ಯದ ಲೆಕ್ಕಾಚಾರದಿಂದ ನೋಡಿದರೆ ಸಿದ್ಧಲಿಂಗಯ್ಯ ಕವಿಯೇ ಅಲ್ಲ; ದೇವನೂರರ ಕತೆಗಳು ಸಾಹಿತ್ಯಕ ಕ್ರಮದಲ್ಲಿ ಬರೆದ ಗದ್ಯವೇ ಅಲ್ಲ. ಆದರೆ ಸಾಹಿತ್ಯದ ಮಡಿವಂತಿಕೆ ಮುರಿಯುವುದರಲ್ಲಿ ಅವರು ಮುಖ್ಯ ಆಗುತ್ತಾರೆ. ಹಾಗೆ ಬರೆಯುವ ಒತ್ತಡವನ್ನು ಈ ಸಮಾಜ ನಿರ್ಮಾಣ ಮಾಡಿತು.

ಇನ್ನು ವಿಶ್ವ ಶ್ರೇಷ್ಠ ನಟ ಚಾರ್ಲಿ ಚಾಪ್ಲಿನ್ ನೋಡಿ. ಆತನ ತಾಯಿ ನರ್ತಕಿ, ವೇಶ್ಯೆ. ಕ್ಲಬ್‌ಗಳಲ್ಲಿ ನೃತ್ಯ ನಡೆಯುವಾಗ ಉಳ್ಳವರು ಎಸೆಯುವ ನಾಣ್ಯ ಎತ್ತಿಕೊಳ್ಳಲು ಬಾಲಕ ಚಾರ್ಲಿ ಪ್ರವೇಶಿಸುತ್ತಿದ್ದ. ಆತ ಬರುವ ಶೈಲಿ, ನಾಣ್ಯ ಎತ್ತಿಕೊಳ್ಳುವ ಭಂಗಿಗಳೇ ಜನರನ್ನು ನಕ್ಕು ನಗಿಸುತ್ತಿದ್ದವು. ಕ್ರಮೇಣ ಜನ ಅವನ ನಟನೆ ನೋಡಲು ಬರತೊಡಗಿದರು. ಹೀಗೆ ಸಾಮಾಜಿಕ ಅಪಮಾನವನ್ನು ತನ್ನ ಅಭಿವ್ಯಕ್ತಿಯ ಕ್ರಮವಾಗಿ ರೂಢಿಸಿಕೊಂಡು ವಿಶ್ವಪ್ರಸಿದ್ಧನಾದವನು ಚಾರ್ಲಿ. ಹೊಸಕಾಲದ ಸವಾಲುಗಳಿಗೆ ನಾವು ಎದುರಾಗಬೇಕಾಗಿರುವುದೂ ಈ ತೆರನಾಗಿಯೇ. ಅಂದರೆ ಹಳ್ಳಿಗಾಡಿನವರ ಸಣ್ಣ ಅಪಮಾನವನ್ನು ಕಲೆಯಾಗಿ ಪರಿವರ್ತಿಸಿಕೊಂಡಾಗ ಜಗತ್ತಿಗೆ ಬೇಕಾದ ದೊಡ್ಡ ತಿಳಿವಳಿಕೆಯಾಗಿ ಅದು ಮಾರ್ಪಾಟಾಗಬಹುದು. ನಮ್ಮ ಅಪಮಾನವನ್ನು ಚಿತ್ರಕಲೆ, ಸಾಹಿತ್ಯ, ಸಂಗೀತ, ನಾಟಕ ಇತ್ಯಾದಿ ಪ್ರಕಾರಗಳ ಮೂಲಕ ದಾಖಲಿಸುತ್ತಾ ಹೋದಾಗ ಅದು ಈ ಸಮಾಜಕ್ಕೆ ಬೇಕಾದ ಎಚ್ಚರವಾಗಿ, ವಿವೇಕವಾಗಿ ಪರಿಣಮಿಸಬಹುದು.

ಇನ್ನು ಬೇಕಾದುದು ಒಂದಷ್ಟು ಹೊಣೆಗಾರಿಕೆ ಮತ್ತು ಸಾಮಾಜಿಕವಾದ ಎಚ್ಚರ. ಮತೀಯವಾದ, ಧಾರ್ಮಿಕವಾದ ಎಚ್ಚರ, ಹೊಸ ಕಾಲದ, ಹೊಸ ಬಗೆಯ ಶೋಷಣೆ ಕುರಿತ ಎಚ್ಚರ ಮುಖ್ಯ. ಜಗತ್ತಿನ ತಂತ್ರಜ್ಞಾನ ನಿರ್ಮಿಸುವ ಅಂತರವನ್ನು ಹೇಗೆ ಹೋಗಲಾಡಿಸಿಕೊಳ್ಳಬೇಕು? ನಮ್ಮ ಹಳ್ಳಿಗಾಡಿನ ತಿಳಿವಳಿಕೆಯನ್ನು ಆಧುನಿಕ ತಂತ್ರಜ್ಞಾನ ನುಂಗಿ ಹಾಕುವುದಾದರೆ ಅದರ ಜತೆ ಹೇಗೆ ಜಗಳ ಮಾಡಬೇಕು? ಜಗಳ ಪ್ರಯೋಜನವಿಲ್ಲವೆಂದಾಗ ಸ್ನೇಹ ಹೇಗೆ ಸಾಧ್ಯ? ಎಂಬ ಜಿಜ್ಞಾಸೆ ಅಗತ್ಯ. ಇದಕ್ಕೆಲ್ಲಾ ಪರಾಮರ್ಶನಾ ಪಠ್ಯವಿಲ್ಲ. ನಮ್ಮರಿವೇ ಗುರು, ಅನುಭವವೇ ಸಾಧನ. ನಮ್ಮ ನಾಳೆಗಳನ್ನು ಹಸನಾಗಿಸಲು ಈ ನಿಟ್ಟಿನಲ್ಲಿ ಆಲೋಚಿಸಬೇಕು.

●

---

**ಚಿಕ್ಕನಾಯಕನಹಳ್ಳಿ ತಾಲೂಕು ಮತಿಘಟ್ಟ ಪದವಿಪೂರ್ವ ಕಾಲೇಜಿನಲ್ಲಿ ಸಾಂಸ್ಕೃತಿಕ ವೇದಿಕೆಯನ್ನು ಉದ್ಘಾಟಿಸಿ ಆಡಿದ ಮಾತುಗಳ ಸಂಗ್ರಹರೂಪ**

❑ ಲಲಿತಾ ಸಿದ್ದಬಸವಯ್ಯ

# ಡೆಯುತ್ತಲೇ ನೆನಪು, ನೆನಪಿನಲ್ಲೇ ನಡಿಗೆ...

**ಚ**ಂದಮಾಮದ ಚಿತ್ರವೆದ್ದು ಬಂದಂತೆ
ಕಣ್ಣು ತುಟಿ ಕದಪುಗಳ ಸಂಯೋಜನೆ
ಅಳತೆಗಳ ಕೊಟ್ಟು ಹೇಳಿ ಮಾಡಿಸಿದಂತೆ
ಮೋಹವುಕ್ಕಿಸುವಂತ ಅಂಗರಚನೆ
ತಾಯಕ್ಕನೆಂದರೆ ನಮ್ಮೂರ ಹೊಂದಾವರೆ
ಬಯಲು ಸೀಮೆಯಲೆಲ್ಲೂ ಕಂಡಿರದಂಥ
ಕನ್ನೇರ ನಾಡಿನ ಬಿದಿರಿನೊಳಗಿನ ಚದುರೆ

- 2 -

ಇಂಥ ತಾಯಕ್ಕ
ಮೊನ್ನೆ ಇದ್ದಕ್ಕಿದ್ದಂತೆ
ಮುಗ್ಗಾಳಿ ತಂದೆಸೆದು ಹೋದಂತೆ
ಕಚ್ಚಿದ್ದ ಕಾಗೆ ಬಾಯಿಂದುದುರಿದಂತೆ
ಮರ ಮರೆತ ಗೊರವಂಕ ಕಂಗಾಲಾದಂತೆ
ಇರಿಸುಮುರಿಸಿನ ಇಕ್ಕಟ್ಟಲ್ಲಿ ಮುದಿದನ ಬೆದರಿದಂತೆ
ಇದಿರಾಗಿಬಿಟ್ಟರು

ತಾಯಕ್ಕನೇ ಇದು,
ಅಥವಾ ಅವರ ಪಳೆಯುಳಿಕೆಯೇ
ಕಂತು ಕಂತುಗಳಲ್ಲಿ ತಾಯಕ್ಕನೆಂಬುವಳ ಬಿಂಬಿಸಿದ ಶಿಲ್ಪಿ
ಕಣ್ಣಳತೆಗೆ ಕೊರೆದಿಟ್ಟ ಅಸ್ಥಿಪಂಜರವೇ
ಅರಮನೆ ಐಭೋಗವಳಿದು ಉಳಿದೊಂದು ಬೋದಿಗೆಯೆ
ಕೊಪ್ಪರಿಗೆ ನಿಧಿ ಕಣ್ಣೆದುರಿಗೇ ಕರಗಿ ತಳಹಿಡಿದ ಬಿಲ್ಲೆಯೇ
ತುಂಬಿದ್ದ ಬಾವಿ ಮಂಗಳಮಾಯವಾಗಿ ನೆಲಕಂಡ ಹಕ್ಕಿ ಗುಟುಕೇ
ಅಳುವುದೋ, ನಗುವುದೋ, ಮಗ್ಗುಲಿದ್ದವರ ಪರಿಚಯಿಸುವುದೋ
ಇಂಥವರ ಮಗಳೆಂದರೆ ನೆನಪವಸ್ತ್ರದ ಮಡಿಕೆ ಬಿಚ್ಚಬಹುದೋ

- 3 -

ನಿಂತ ರಸ್ತೆಯೆಂಬುದೋ
ಹುತ್ತದಿಂದೊಡೆದ ರೆಕ್ಕೆಹುಳುವಿನ ತೆರ ಪುತುಗುಡುತ್ತಿತ್ತು
ಅವರ ಹೆಗಲನು ಇವರು ತಾಕಿಸದೆ ನಡೆದರದೇ ಸಾಹಸವಾದಂತೆ
ಮುಸ್ಸಂಜೆ ಗಲಗಲದಿ ನಮ್ಮ ಬಾಯಿನ ಮಾತು ಇನ್ಯಾರೋ ಆಡಿದಂತೆ
ಎದುರುಬದರಿನ ಕಣ್ಣುಕುಕ್ಕುವ ದೀಪಮಾಲೆಗಳೆಲ್ಲೋ ಮಿಲಾಕತ್ತಾಗಿ
ಬುಟ್ಟಿಬುಟ್ಟಿ ಬೆಳಕು ನಮ್ಮ ನೆತ್ತಿಯ ಮೇಲೇ ಇಳಿಸುರಿದಂತೆ

ಸನಿಹಕ್ಕೆ ಸಾರಿ ಕೇಳಿದೆ, 'ತಾಯಕ್ಕ ನನ್ನ ನೆನಪಾಯಿತೇ'
ನಾನಲ್ಲವೇ ಪುಟ್ಟಮ್ಮಣ್ಣಿಯ ಮಗಳು ಲಲಿತೆ
ನಮ್ಮನೆಯಲ್ಲಿ ಮೈನರೆದ ಹೆಣ್ಣುಗಳ ಒಸಗೆಗೆ
ನಿಮ್ಮದೇ ಅಲ್ಲವೇ ನಿಲವುದಾಗೀನ, ರಾಗಟೆ, ನಾಗರ, ತಿರುಪಿನ ಬಿಲ್ಲೆ
ಕುಚ್ಚು, ಬೈತಲೆಬಟ್ಟು, ಕೊರಳ ಚಿಂತಾಕ
ಒಂದೇ, ಎರಡೇ......, ತಾಯಕ್ಕ ನೀವದನೆಲ್ಲ ತೊಟ್ಟು ಬಂದಾಗ
ಕಾಸಾರದಂಚಲ್ಲಿ ನಸುಬಾಗಿ ಅರಸಂಚೆಯೊಂದಿಗೆ ಸಲ್ಲಪಿಸೊ ದಮಯಂತಿಯಂತೆ
ನಾನು ಇಷ್ಟುಸುಖದ ನೆನಪಲ್ಲಿ ಇಷ್ಟಗಲ ನಕ್ಕೆ

- 4 -

ತಾಯಕ್ಕನೂ ನಕ್ಕಂತೆ ಮಾಡಿದರು
ನಗುವಲ್ಲಿ ಸುಖವಿರಲಿಲ್ಲ... ದುಃಖವಿತ್ತೇ... ಇಲ್ಲ
ಉಂಡ ಸುಖಬೆಳಕು, ಕಂಡ ದುಃಖದ ನೆರಳು
ಉರುಳಿ ಮೈಯುಂಡ ಅಚ್ಚುಗಾಲಿಯ ತೇರು
ಜಂಗುಳಿಯ ಕಡೆಗೊಮ್ಮೆ ಹಿಡಿಮುಚ್ಚಿ ಚೆಲ್ಲಿದರು
ಹಗೂರ ಬೆನ್ನು ಸವರಿ... ಅಷ್ಟೆ... ಬಂದಷ್ಟೆ ಬೆರಗಲ್ಲಿ ಮರೆಯಾಯ್ತು ಇಂದ್ರಜಾಲ

ಇಲ್ಲ, ಇಲ್ಲ ತಾಯಕ್ಕ ನಿಮ್ಮನ್ನು ಬಿಡುವುದಿಲ್ಲ
ಬಾಯ್ತುಂಬಿ ತುಳುಕಿರುವ ಮಾತುಗಳಿನ್ನೂ ಮುಕ್ಕಳಿಸಿಲ್ಲ
ಅಪ್ಪಣ್ಣಮಾಮ ಎಲ್ಲಿದ್ದಾರೆಂದು ನೀವಿನ್ನು ಹೇಳಿಯೇ ಇಲ್ಲ
ಇಗೋ ಭುಜಹಿಡಿದೆ, ಹಿಡಿದೆ, ಹಿಡಿದೇಬಿಟ್ಟೆ ಎನುವಾಗ
ಯಾರೋ ಧುತ್ತನೆ ತಳ್ಳಿ ಅವರಿಗಡ್ಡವಾಗಿದ್ದ ನನ್ನ ಪರಿಹರಿಸಿ ಮುನ್ನಡೆದರು

- 5 -

ತುಂಬಿರುವ ಬೀದಿಯಲಿ
ನಿಂತು ನೆನಪುಗಳ ಕೆದಕುವಂತಿಲ್ಲ
ನಡೆಯುತ್ತಲೇ ನೆನಪು, ನೆನಪಿನಲ್ಲೇ ನಡಿಗೆ
ಎಲ್ಲುಂಟು ತಾಯಕ್ಕ ಮತ್ತೆ ಸಿಕ್ಕಾರೆಂಬ ನೆಚ್ಚುಗೆ

# ನಿಯತ್ತು



ಇತತ ಜರುಗಬ್ಯಾಡ, ಮಗು ಮಲಗೈತೆ
ಅತ್ತೂ ಅತ್ತೂ ಈಗಿನ್ನ ಹಂಗೆ ಕಣ್ಣು ಮುಚ್ಚೈತೆ
ತೋ, ಬಿಡು ಎದೆ, ನಂದಿನ್ನಾ ಕುಡಿಯೋ ಮಗು
ಕಿರುಚಬ್ಯಾಡ, ಬೇಕಾದ್ರಿರು ಬ್ಯಾಡದಿದ್ರೆ ಎದ್ದೋಗು
ಏನಂದೆ, ಉಪಾಸ ಬೀಳ್ತಿಯೇ ಬೋಸುಡಿ ಅಂದಾ
ಹೊಸದಲ್ಲ, ಕಂಡಿದೀನಿ ಹೋಗು ಹುಟ್ಟಿದಾಗಿನಿಂದ
ಜಂಬೂ ಸವಾರಿ ತೋರಿಸ್ತಾರಾ, ನಿನ್ನಿಪ್ಪತ್ತು ರೂಪಾಯ್ಗೆ
ಹಾಲಿನ ಪುಡಿ ಅರ್ಧ ಡಬ್ಬ ಬರಲ್ಲ ನನ್ನ ಮಗೀಗೆ
ಏನಂದೆ, ಒಂದಿನದ ಪೂರ್ತಿ ಕೂಲಿ ಇಷ್ಟೇ ಕಣೆ ಅಂದಾ
ತೋತ್ತರಿಕೆ, ಹೋಗ್ಲಿ ಬಿಡತ್ತ, ಇವತ್ತು ಕಾಸೇನು ಬ್ಯಾಡ
ಅಂಗಂತ ನೋಡು, ಅಗಲಗಲ ಇಲ್ಲಿಗೇ ಬರಬ್ಯಾಡ
ಪೊಟ್ಟೆಪಾಡು, ನಂದೂ ಮಗಿಂದೂ ನಡೀಬೇಕಲ್ಲವಾ
ಯಾಕ್ ಸುಮ್ನಾದೆ, ಪುಗಸಟ್ಟೆಗೆ ಮನಸೊಪ್ಪುತಾ ಇಲ್ಲವಾ
ನಿಯತ್ತುಗಾರ, ಓಗ್ಲಿ ಮುಂದಿನ್ಸಾರಿ ಮಗೀಗೊಂದು ಬೊಂಬೆ ತಗಂಬಾ

# ಇಳೆಯ ಅರ್ಥಗಳ ಧರಿಸಿ



**ಇಳೆ ಎಂಬ ಕನಸು**
ಲೇ : ಶ್ರೀಧರ ಬಳಗಾರ
ಪ್ರ: ಆನಂದ ಕಂದ ಗ್ರಂಥಮಾಲೆ, ಮಲ್ಲಾಡಿಹಳ್ಳಿ
ಬೆಲೆ : 110 ರೂ.

**ಕ**ನಸು-ನನಸುಗಳ, ಅಧ್ಯಾತ್ಮ-ಭೌತಿಕತೆಗಳ, ಸಹಜ-ಅಸಹಜಗಳ ಹೊಯ್ದಾಟದಲ್ಲಿ ರೂಪುಗೊಂಡಿರುವ, ಒಂದೇ ಬಿಂಬದ ಹಲವು ಪ್ರತಿಬಿಂಬಗಳಂತಿರುವ ಕತೆಗಳ ಸಂಕಲನವೇ ಶ್ರೀಧರ ಬಳಗಾರರ 'ಇಳೆ ಎಂಬ ಕನಸು'. ಪರಿಸರದ ಬದಲಾವಣೆಗಳ ಮೂಲಕ ಕಲ್ಪಿತವಾಗಿರುವ ಕಾಲವು ಎಲ್ಲಾ ಸೃಷ್ಟಿಕ್ರಿಯೆಗಳಲ್ಲಿ ಪ್ರಧಾನವಾದ ಸ್ಥಾನವನ್ನು ಹೊಂದಿವುದರಿಂದಾಗಿ, ಸಂದರ್ಭಗಳ ನಿಕಷದಲ್ಲಿಡದೆ ಯಾವ ಘಟನೆಗಳೂ ಅರ್ಥವಾಗಲಾರವು. ಯಾವುದೋ ಸಂದರ್ಭದಲ್ಲಿ ಹುಟ್ಟಿಕೊಳ್ಳುವ ಕತೆಗಳು ಅಥವಾ ಘಟನೆಗಳು, ಆ ಸಂದರ್ಭವನ್ನು ಮೀರಿ ವ್ಯಾಪಿಸುವುದೇ ಈ ಜೀವನ ಚಕ್ರದ ನಿರಂತರತೆಯನ್ನು ಕಾಯ್ದುಕೊಳ್ಳುವುದಕ್ಕೆ ಕಾರಣವಾಗಿವೆ. ಹೀಗೆ ಮನುಜ ಲೋಕದ ಮೂಲ ಚೈತನ್ಯವು ಒಂದೇ ಆಗಿದೆ ಎನ್ನುವುದಕ್ಕೆ ಪ್ರಕೃತಿ ಚಕ್ರವೂ ನಮ್ಮ ಬದುಕಿನ ಚಕ್ರವೂ ಸಾಕ್ಷಿಗಳು. ಈ ಚಕ್ರಗಳನ್ನು ಹಿಡಿದಿಟ್ಟಿರುವ ಬೀಮ್ (ಅಥವಾ ಥೀಮ್), ಕನಸುಗಳನ್ನು ಅಥವಾ ನನಸಿನಂಥಾ ಕನಸುಗಳನ್ನು ಸೃಷ್ಟಿಸುತ್ತಲೇ ಇರುತ್ತದೆ. ಇಲ್ಲಿನ ಎಲ್ಲಾ ಕತೆಗಳಲ್ಲಿ ವ್ಯಾಪಿಸಿಕೊಂಡಿರುವ 'ಇಳೆ ಎಂಬ ಕನಸು' ರೂಪಕದ ಮೂಲಕ ಬಳಗಾರರು, ಈ ಕನಸನ್ನು ಸುಂದರವಾಗಿಸಲು ಸುಖಕರವಾಗಿಸಲು ಹಾತೊರೆಯುತ್ತಾರೆ. ಭೂಲೋಕವು ಪರಮ ಸತ್ಯವಲ್ಲ, ಇದೊಂದು ಕರ್ಮಭೂಮಿ ಎನ್ನುವ ಆಧ್ಯಾತ್ಮಿಕ ಚಿಂತನೆಯನ್ನೇ ರೂಪಕವಾಗಿ ಪರಿಭಾವಿಸುವ ಮೂಲಕ, ನಮ್ಮೆಲ್ಲಾ ಲೌಕಿಕ ಭ್ರಮೆಗಳನ್ನು ಕಳೆದುಕೊಳ್ಳಬಹುದು ಎಂಬುದು ವಾಸ್ತವ. ಹೀಗೆ ಅಮೂರ್ತ ಕನಸುಗಳ ಮೂಲಕವೂ ಬದುಕಿನ ಮೂರ್ತ ಕನಸುಗಳನ್ನು ನನಸಾಗಿಸಬಹುದೆಂದು ಕತೆಗಾರನ ಯೋಚನೆ. ಹಾಗಾಗಿಯೇ ಇಲ್ಲಿನ ಎಲ್ಲಾ ಕತೆಗಳೂ ಅಲೌಕಿಕ-ಲೌಕಿಕಗಳ ಮಿಶ್ರಣದಲ್ಲಿ ಮೂರ್ತವಾದ ಸತ್ಯವೊಂದನ್ನು ಅಮೂರ್ತ ಸನ್ನಿವೇಶದಲ್ಲಿ ಹೇಳುತ್ತಾ ಕೊನೆಗೊಳ್ಳುತ್ತವೆ.

ಬಳಗಾರರ ಕತೆಗಳಲ್ಲಿ ಮುಖ್ಯವಾಗಿ ಎರಡು ರೀತಿಯ ಪಾತ್ರಗಳನ್ನು ಕಾಣಬಹುದು. ಒಂದು, ಪ್ರಕೃತಿಯನ್ನು ತನ್ನ ಜೀವದಂತೆ ದೇವರಂತೆ ಪ್ರೀತಿಸುವ ಪಾತ್ರ. ಇನ್ನೊಂದು, ಆ ಅಲೌಕಿಕತೆಯನ್ನು ಲೌಕಿಕ ಸಹಜ ಬೆರಗಿನಿಂದ ಗಮನಿಸುವ ಸ್ಪಂದಿಸುವ ಜೀವನ ಪ್ರೀತಿಯ ಪಾತ್ರ. 'ಇಳೆ ಎಂಬ ಕನಸು' ಕತೆಯಲ್ಲಿ ದೇವರೂ ಪ್ರಕೃತಿಯೂ ಜನಕಜ್ಜನ ಬದುಕಿನ ಪ್ರಿಯ ಬಂಧಗಳು. ಕಾಳಿ ನದಿಗೆ ಕಟ್ಟಿದ ಅಣೆಕಟ್ಟಿನಿಂದಾಗಿ ನಿಂತ

ನೆಲವೇ ಮುಳುಗುತ್ತಿರುವಾಗ ಜಟಕ, ನಾಗ ಮೊದಲಾದ ದೇವತೆಗಳು ಆತನ ಕನಸಿನಲ್ಲಿ ಬಂದು ತಮ್ಮನ್ನು ರಕ್ಷಿಸೆಂದು ಹೇಳಿದಂತಾಗುತ್ತದೆ. ಆದರೆ ಬಳಿಕ, ದೇವರನ್ನು ರಕ್ಷಿಸ ಹೊರಡುವಷ್ಟು ಅಹಂಕಾರ ತನಗೆ ಬಂತಲ್ಲವೆಂದು ಜನಕಜ್ಜನೇ ಆಶ್ಚರ್ಯ ಪಡುತ್ತಾನೆ. ಮನೆ, ಹೊಲಗಳು ಮುಳುಗುತ್ತಿದ್ದಾಗಲೂ, ಮಗಳ ಬಾಣಂತನ ಸಮಯದಲ್ಲಿ ಕಡತಂದ ಪಾವು ಜೀರಿಗೆಯನ್ನು ವಾಪಸ್ ಕೊಡದಿರುವುದು ನೆನಪಾಗಿ ಚಡಪಡಿಸುವ ಜನಕಜ್ಜನು ಭೂಮಿ, ದೇವರು, ಮನುಷ್ಯರ ಜೊತೆ ಗಾಢವಾದ ಸಂಬಂಧವನ್ನಿಟ್ಟುಕೊಂಡವನು. ಬಳಗಾರರ ಕತೆಗಳಲ್ಲಿ ದೇವರು ಮತ್ತು ಪ್ರಕೃತಿ ವಿವಿಧ ರೂಪಗಳಲ್ಲಿ ಹಲವು ಸ್ಥಾನಗಳಲ್ಲಿ ಮೈದಳೆಯುತ್ತವೆ. ಅಣೆಕಟ್ಟು ಕಟ್ಟುವುದು-ಭೂಮಿ ಮುಳುಗುವುದು ವ್ಯಾವಹಾರಿಕವಾಗಿ ಸರಿಯೋ ತಪ್ಪೋ ಎಂಬ ಪ್ರಶ್ನೆ ಗಹನವಾದ್ದೇನಲ್ಲ. ಯಾಕೆಂದರೆ ಜನಕಜ್ಜನಿಗೆ ಭೂಮಿಯ ಮೇಲಿರುವಂತಹ ಪ್ರೀತಿಯ ಅರ್ಥದಷ್ಟಾದರೂ ಪ್ರೀತಿಯು ಅಣೆಕಟ್ಟು ಕಟ್ಟುವವರಿಗೂ ಇದ್ದಾಗ ಮಾತ್ರ, ಅಣೆಕಟ್ಟು ಕಟ್ಟುವುದು-ಭೂಮಿ ಮುಳುಗುವುದು ಸಹಜ ನೆಲೆಯಲ್ಲಿ ಸಮಾಧಾನಗಳನ್ನು ಪಡೆದುಕೊಂಡಾವು. ತಾನು ಬದುಕಿದ್ದ ಭೂಮಿಯು ಮುಳುಗಿ, ನಂತರ ನೆಲೆ ನಿಂತ ಹೊಸ ಊರಿನಲ್ಲೂ ಸಂತಸದ ಬದುಕನ್ನು ಪಡೆಯುವುದಕ್ಕೆ ಜನಕಜ್ಜ ಯತ್ನಿಸುತ್ತಾನೆ. ಅವನು ದೇವರನ್ನು ಆಧರಿಸಿಕೊಂಡಿರುವುದು ಸಹಜ ನೆಲೆಯ ಬದುಕಿಗಾಗಿಯೇ ಹೊರತು ಡಂಭಾಚಾರಗಳಿಗಲ್ಲ.

ಪುನರ್ವಸತಿ ಸೌಕರ್ಯ ಒದಗಿಸಿದ್ದ ಪ್ರದೇಶವನ್ನು ಕತೆಗಾರರು ಅಕ್ಷರಗಳಲ್ಲಿ ಕಟ್ಟುವುದು ಹೀಗೆ- ''ಏಕರೂಪದ ಮನೆಗಳಲ್ಲಿ ತಂಗಿದ್ದ ಜನರು ಗಂಟುಮೂಟೆ ಬಿಚ್ಚದೆ, ಯಾವುದೋ ಅವ್ಯಕ್ತ ಕರೆಗೆ ಕಾಯುತ್ತಿರುವಂತೆ ತೂಕಡಿಸುತ್ತಿದ್ದರು. ಅವರಿಗೆ ಪ್ರಾಪ್ತವಾದ ಹೊಸ ವಿಳಾಸ, ದಾರಿ, ಕ್ಷಿತಿಜ, ಅಂತರಿಕ್ಷಗಳಿಗೆ ಹೊಂದಿಕೊಳ್ಳಲಾರದೆ ಜೀವನ ಅಸ್ತವ್ಯಸ್ತವಾಗಿತ್ತು. ಹಲವರು ಹಣದ ಮೂಟೆ ಹೊತ್ತು ನಗರ ಸೇರಿದ್ದರು. ಇಲ್ಲಿ ಉಳಿದ ಜೀವಗಳಿಗೆ ಚರಿತ್ರೆ, ಉದ್ಯೋಗ, ವ್ಯವಸಾಯ, ನೆನಪುಗಳ ಸಂಪರ್ಕವಿಲ್ಲದೆ ಶೂನ್ಯ ಗುರುತ್ವದ ವಿಚಿತ್ರ ಗ್ರಹದಲ್ಲಿ ತೂಕವಿಲ್ಲದೆ ನಡೆದಾಡತೊಡಗಿದರು. ಕರ್ಮಕಾಂಡವಿಲ್ಲದ ಜೀವನ, ಅಸಹನೀಯ ಬೇಸರವಾಗಿ ಹೋಯಿತು. ಸುಖ ದುಃಖಗಳ ಸಂತೆಯಿರದ ಅಸಂಗತ ದೈನಿಕದಲ್ಲಿ ಎಲ್ಲವನ್ನೂ ಮಡ್ಡಿನ ಜಾದೂವಿನಿಂದ ಸೃಷ್ಟಿಸುವ ಸಿದ್ಧ ಜಗತ್ತಿನ ಬಾಗಿಲು ತೆರೆದುಕೊಂಡಿತು. ಹಠಾತ್ತನೆ ಮುಗಿದ ದಾರಿಗಳಂತೆ ಸಂಬಂಧಗಳು ನಿಂತು ಹೋಗಿದ್ದವು.'' ನಮ್ಮ ಜಗತ್ತೇ ಒಂದು ಪುನರ್ವಸತಿ ಕೇಂದ್ರದಂತೆ ಪರಿವರ್ತಿತವಾಗುತ್ತಿರುವ ಈ ಸನ್ನಿವೇಶದಲ್ಲಿ ಬಳಗಾರರ ಕತೆಗಳು ಅನೂಹ್ಯ ಲಿಂಕ್‌ಗಳನ್ನು ಹಾಕಿಕೊಡುತ್ತವೆ.

'ಇಳೆ ಎಂಬ ಕನಸು' ಕತೆಯಲ್ಲಿ ಜನಕಜ್ಜನನ್ನೇ ಪ್ರಭಾವಿಸಿದ ಪಾತ್ರವೆಂದರೆ ಕೆಲಸದ ನಾಗು. ಜನಕಜ್ಜನಿಗೆ ನಾಗು ಯೋಗಿಯಂತೆ ಕಾಣುತ್ತಿದ್ದ. ಸದ್ಯ ತಾನು ಅನುಭವಿಸುತ್ತಿರುವ ಸಂಕಟಗಳು ನಾಗುವಿನಲ್ಲಿ ಎಂದೋ ಶುರುವಾಗಿದೆಯೆಂದು ಜನಕಜ್ಜನಿಗೆ ಅನ್ನಿಸುತ್ತದೆ. ದೇವರು-ಪ್ರಕೃತಿ-ಜನ ಏನೇ ಮಾಡಿದರೂ ಸ್ಥಿತಪ್ರಜ್ಞನಾಗಿರುವ ನಾಗು ಒಂದು ವಿಶಿಷ್ಟ ಪಾತ್ರ.

ಕತೆಗಾರನ ಪ್ರಧಾನ ನಂಬಿಕೆಯ ನೆಲೆಗಳು ಎರಡು: ಒಂದು, ಪ್ರಕೃತಿ. ಇನ್ನೊಂದು, ದೇವರು. ಸಹಜ ನೆಲೆಗಳಾದ ಅವೆರಡೂ ಅಸಹಜವಾಗಿಯೂ ಕಾಣಿಸಿಕೊಳ್ಳುತ್ತವೆ. ಈ ಪ್ರಕೃತಿ-ದೇವರನ್ನು ಒಂದುಗೂಡಿಸುವ ಸಮಾನವಾಗಿಸುವ ಅಂಶವೇ ಚೈತನ್ಯ. ಈ ಸಂಕಲನದಲ್ಲಿರುವ ಎಲ್ಲಾ ಕತೆಗಳೂ ಅಂತಹ ಚೈತನ್ಯದ ಹುಡುಕಾಟಗಳೇ ಆಗಿವೆ.

ಇಲ್ಲಿ ಅತ್ಯಂತ ಔಚಿತ್ಯಪೂರ್ಣವಾಗಿರುವ 'ಇಳೆ' ಎಂಬ ಪದವನ್ನು ಗಮನಿಸಬೇಕು. ಭಾಷೆ, ವಿಷಮಾರ್ಥ, ಅನ್ನ, ನೀರು, ರಸಮಯ ವಸ್ತುಗಳ ಸಮೂಹ, ಉತ್ತಮ ಸ್ಥಿತಿ, ಒಂದು ಎಂಬ ಅಂಕೆಯ ಸಂಕೇತ ಎಂಬ ಅರ್ಥಗಳನ್ನು ಇಳೆ ಎಂಬ ಪದವು ಹೊಂದಿದೆ. ಈ ಎಲ್ಲಾ ಅರ್ಥಗಳನ್ನು ಒಳಗೊಳ್ಳುವ ಹಾಗೆ ಈ ಕತೆಯು ಬೆಳೆದಿದೆಯೆಂದರೆ ಅತಿಶಯೋಕ್ತಿ ಆಗಲಾರದು. ಇಂತಹ ಕತೆಯ ಬಾಜೂ ಕುಳಿತುಕೊಳ್ಳುವುದು ಆನಂದದಾಯಕವಾಗಿದೆ.

**ಸುಧನ್ವಾ ದೇರಾಜೆ**

# ಮೌನದೊಡಲಿಂದ ಶಬ್ದಗಳು




**ಅಗ್ನಿರಾಗ**
ಲೇ : ಕೇಶವಶರ್ಮ
ಪ್ರ: ಬಂಡಾಯ ಪ್ರಕಾಶನ, ಅರೆಅಂಗಡಿ, ಹೊನ್ನಾವರ(ಉ.ಕ. ಜಿಲ್ಲೆ)
ಬೆಲೆ : 30 ರೂ.

**ಕ**ನ್ನಡ ನೆಲದಲ್ಲಿ 'ಸ್ತ್ರೀವಾದ'ವೆಂಬುದು ಇನ್ನೂ ಬೇರುಬಿಡದ ಹೊತ್ತಿನಲ್ಲಿ ''ಸ್ತ್ರೀವಾದಿ'' ವಿಮರ್ಶೆಗೆ ಬೇಕಾದ ಸಲಕರಣೆಗಳು, ತಾತ್ವಿಕ ಒಳಮೈಗಳನ್ನು ರೂಪಿಸಿದ ಡಾ. ಕೇಶವ ಶರ್ಮ ''ಅಗ್ನಿರಾಗ''ದಲ್ಲಿ ಕವಿಯಾಗಿ ಅರಳಿದ್ದಾರೆ.

ಕಾವ್ಯವೊಂದು ಕಟ್ಟೇಕಾಂತದಲ್ಲಿ ಸ್ರವಿಸುವ ಭಾವದೊರತೆ ಮಾತ್ರವಲ್ಲ; ಅದು ಗತದೊಂದಿಗೆ, ಪುರಾಣ-ಕಾವ್ಯಗಳೊಂದಿಗೆ, ಸುಡುವಾಸ್ತವದೊಂದಿಗೆ ನಡೆಸುವ ಅನುಸಂಧಾನ ಎಂದು ಕವಿ ಭಾವಿಸಿದಂತಿದೆ. ಸ್ತ್ರೀವಾದಿ ಚಿಂತನೆ ಇಲ್ಲಿಯ ಕವಿತೆಗಳನ್ನು ಪ್ರಭಾವಿಸಿದೆ.

ವರ್ಗ ಸಮಾಜ ಹುಟ್ಟಿದಾರಭ್ಯ ಸ್ತ್ರೀಸಂಕುಲವನ್ನು ಅನವರತ ಕಾಡುತ್ತಿರುವ ತಾರತಮ್ಯ, ಬೇಗುದಿ, ಅಪಮಾನ, ಸ್ವಾತಂತ್ರ್ಯದ ತುಯ್ತಗಳನ್ನು ಪುರಾಣ-ಕಾವ್ಯಗಳಲ್ಲಿ ಜನಪ್ರಿಯವಾದ ಪಾತ್ರಗಳ ಮುಖೇನ ಹೊಸ ಬಗೆಯಲ್ಲಿ ಕಡೆದುಕೊಡುವ ಯತ್ನ ಇಲ್ಲಿದೆ. ಅಪ್ಸರೆ ಊರ್ವಶಿ, ಅಮೃತಮತಿ, ಶಕುಂತಲೆ, ತಿರುಕೊಳವಿನಾಚಿ ಹೀಗೆ ಪ್ರಾಚೀನ ಕಾವ್ಯಗಳಲ್ಲಿ ಬಂದುಹೋದ ಸ್ತ್ರೀಪಾತ್ರಗಳನ್ನು ಹೊಸಭಾಷೆ, ಹೊಸ ಚಿಂತನೆಯಲ್ಲಿ ಸಮಕಾಲೀನ ಪ್ರತಿರೂಪದಂತೆ ಮರುಸೃಷ್ಟಿ ಮಾಡಲಾಗಿದೆ. ಇಡೀ ಸಂಕಲನದ ಹಿಂದೆ ಪ್ರಾಚೀನ ಕಾವ್ಯಗಳ ಆಳ ಓದು, ಸೂಕ್ಷ್ಮಗ್ರಹಿಕೆ ಶ್ರದ್ಧೆಯಿಂದ ಕೆಲಸ ಮಾಡಿದೆ.

*''ಅರಿವು ಈಗ ಇರಿಯುವ ಅಲಗು*
*ಶೂನ್ಯ ತುಂಬಿದೆ ಬೀದಿಯಲ್ಲಿ*
*ಆಕಾಶದಲ್ಲಿ ನಕ್ಷತ್ರಗಳು ಬಿಕ್ಕಳಿಸುತ್ತವೆ*
*ಚಂದದ ಚಂದಿರನಿಗೆ ಉರಿಯುವ ಹುಚ್ಚು''*

(ಮಾತಿನೊಳಗಣ ಮೌನ)

ಈ ಸಾಲುಗಳು ಸಂಕಲನದ ಸ್ತ್ರೀಪಾತ್ರಗಳ ಒಟ್ಟಂದಕ್ಕೆ ನೀಡಿದ ವ್ಯಾಖ್ಯೆಯಂತಿವೆ.

ಮಾನವ ಸಮುದಾಯವನ್ನು ಬಿಡದೆ ಬೇಯಿಸಿರುವ ಯುದ್ಧ, ಹಿಂಸೆಯಿಂದ ಬಿಡುಗಡೆಯಾಗಬೇಕೆಂಬ ತುಡಿತ ಈ ಸಂಕಲನದಲ್ಲಿ ಧ್ಯಾನದಂತೆ ಉದ್ದಕ್ಕೂ ಬಂದಿದೆ.

*''ಯುದ್ಧ: ಹಿಂಸೆಯ ನಾಡಲ್ಲಿ ಯಾವ ಮಾನಿನಿಯ ಮಾನ*
*ಹೋಯ್ತು?*
*ಯಾರ ಮನೆಯ ಕಂದಮ್ಮಗಳ ಕನಸು ಕಂಗಳು ಮುಚ್ಚಿದವು*

*ಸಹಸ್ರ ಸಾವಿನ ನಡುವೆ 'ಧರ್ಮೋ ರಕ್ಷತಿ*
*ರಕ್ಷಿತಃ ಮಂತ್ರ ಪಠಣ*
*ಅಹಿಂಸೆಯ ಸತ್ಯಾಗ್ರಹಿಯ ಬೀದಿಯಲ್ಲಿ ಚೆಲ್ಲಿದ ರಕ್ತ*
*ಉಪ್ಪು ನೀರಲ್ಲಿ ತೊಳೆದರೂ ಹೋಗಲಿಲ್ಲ''*
*(ಅಶ್ವಮೇಧ ಯಾಗ)*

ಮಹಾಭಾರತದ ಅಶ್ವಮೇಧಯಾಗದ ಕತೆಯಲ್ಲಿ ಬೆಳೆಯುತ್ತಾ ಹೋಗುವ ಈ ಕವಿತೆ ಸಂಕಲನದ ಪ್ರಾತಿನಿಧಿಕ ಕವಿತೆಯಂತಿದೆ. ಗಾಂಧಿ ನಾಡಿನ ಆಧುನಿಕ 'ಭಾರತ'ದಲ್ಲಿ ನಡೆದ ನರಮೇಧದ ಹಸಿ ನೆನಪನ್ನು ಕವಿತೆ ಮಾಡುವುದರಿಂದಲೇ, ಇಡೀ ಸಂಕಲನ ಪುರಾಣದ ಕಾವ್ಯ ಲೋಕದೊಳಗೆ ದಾರಿ ಮಾಡಿಕೊಂಡು ನಡೆದರೂ ಸದ್ಯದ ಸುಡು ವಾಸ್ತವಕ್ಕೆ ಕನ್ನಡಿಯಾಗಿದೆ. ಹಾಗಾಗಿಯೇ ಕಾವ್ಯ ಗೆಲ್ಲುತ್ತದೆ ಇಲ್ಲಿ..

*''ಮಾತುಗಳು ಸೋರುವುದಿಲ್ಲ*
*ಶಬ್ದದೊಡಲಿನ ನಡುವೆ ಮೌನ*
*ಮೌನದೊಡಲಿಂದ ಶಬ್ದಗಳು''*
*(ಮಾತಿನೊಳಗಣ ಮೌನ)*

ಇದೇ ಈ ಸಂಕಲನದ ವೈಶಿಷ್ಟ್ಯ. ಬಹುಶಃ ಶರ್ಮರು ವಿಮರ್ಶೆಗೆ ಒಲಿಯದೆ ಕಾವ್ಯಕ್ಕೆ ಪಕ್ಕಾಗಿದ್ದರೆ ಕನ್ನಡ ಕಾವ್ಯ ಮತ್ತೋರ್ವ ಸಶಕ್ತ ಕವಿಯನ್ನು ಪಡಕೊಳ್ಳುತ್ತಿತ್ತು ಎಂಬುದು ಈ ಸಂಕಲನ ಓದಿದ ಕಾವ್ಯಾಸಕ್ತರಿಗೆ ಅನ್ನಿಸುತ್ತದೆ. ಹಾಗಂತ ಕವಿಯೊಬ್ಬನ ಸಂಕಲನದಲ್ಲಿ ಕಾಣಬರುವ 'ಗಟ್ಟಿಯಲ್ಲದ' ಪದ್ಯಗಳು ಇಲ್ಲಿ ಸೇರಿಲ್ಲವೆಂತಲ್ಲ.

ವೈಗ

---

## ಪ್ರತಿ ಸಲವೂ...

ಮಾರ್ಕ್‌ಟ್ವೇನ್ ಒಮ್ಮೆ ಪುಟ್ಟದೊಂದು ಊರಲ್ಲಿ ಉಪನ್ಯಾಸ ನೀಡಬೇಕಾಗಿತ್ತು. ತಮ್ಮ ಗಡ್ಡವನ್ನು ಶೇವ್ ಮಾಡಿಸಲು ಹತ್ತಿರದ ಸಲೂನಿಗೆ ನುಗ್ಗಿದರು.

''ಸಾಹೇಬ್ರು ಊರಿಗೆ ಹೊಸಬ್ರೂಂತ ಕಾಣುತ್ತೆ'' ಸಲೂನಿನವ ಕೇಳಿದ.

''ಹೌದು''

''ನೋಡಿ ಮಾರಾಯ್ರೆ... ನಿಮ್ಮ ಮುಖ ನೋಡಿದ ತಕ್ಷಣ ಗೊತ್ತಾಯ್ತು ನಂಗೆ.. ಅಂದ ಹಾಗೆ ಈವತ್ತು ಸಂಜೆ ಫೇಮಸ್ ರೈಟರ್ ಮಾರ್ಕ್‌ಟ್ವೇನ್ ಉಪನ್ಯಾಸ ಇದೆ. ಆಸಾಮಿ ಸಖತ್ ಮಜವಾಗೆ ಮಾತಾಡ್ತಾರೆ... ನೀವೂ ಹೋಗ್ತಿದೀರಾ?''

''ಹೋಗಬೇಕಂತಲೇ ಇದೆ...'' ಮಾರ್ಕ್‌ಟ್ವೇನ್ ಉಸುರಿದರು.

''ಮತ್ತೆ.. ಟಿಕೆಟ್ ತಗೊಂಡ್ರಾ?''

''ಇಲ್ಲಕಣ್ರೆ''

''ಹಾಗಾದ್ರೆ ನಿಮಗೆ ಸೀಟ್ ಸಿಕ್ಕಲ್ಲ.. ನಿಂತ್ಕೊಂಡೇ ಕೇಳಬೇಕಾಗುತ್ತೆ ಬ್ಯಾಡ್‌ಲಕ್''

''ಅಯ್ಯೋ.. ಅದೇನೋ ಪ್ರತಿಸಲ ಮಾರ್ಕ್‌ಟ್ವೇನ್ ಉಪನ್ಯಾಸಕ್ಕೆ ಹೋದರೂ ನಾನು ನಿಂತೇ ಕೇಳಿಸಿಕೊಳ್ಳಬೇಕಾಗುತ್ತೆ ಬ್ಯಾಡ್‌ಲಕ್'' ಎಂದರು ಮಾರ್ಕ್‌ಟ್ವೇನ್.

●

# ಬಸ್ಸು ಬಂತು ಬಸ್ಸು...

❑ ಶ್ರೀನಿಧಿ ಕರ್ಜೆ

ದಕ್ಷಿಣ ಕನ್ನಡದಲ್ಲಿ ಹುಟ್ಟಿದ್ದಕ್ಕೇ ಇರಬೇಕು ನನಗೂ ಈ ಪ್ರೈವೇಟ್ ಬಸ್ಸುಗಳಿಗೂ ಒಂಥರಾ ಅವಿನಾಭಾವ ಸಂಬಂಧ, ಬಿಡಿಸಲಾಗದ ಅಂಟು (ಫೆವಿಕಲ್ ಹಾಕಿ ಅಂಟಿಸಿದ್ದಲ್ಲ!), ನಂಟು, ಈ ಬಸ್‌ನ ಜೊತೆಗೆ ಎಲ್ಲಾವುದರಲ್ಲೂ ನಾನು ಸೌ ಪ್ರತಿಶತ್ ಪೂರ್ವಾಗ್ರಹ ಪೀಡಿತೆ. ಈ ಸಣ್ಣ ಬಸ್ಸು ಬಿಡಿ. ಅದರ ನೆರಳು ಕಂಡರೂ ನನಗಾಗುವುದಿಲ್ಲ.

ಘಟ್ಟದ ಅಜ್ಜ ಮನೆಗೆ ಹೋಗುವಾಗ ಈ ಸರ್ಕಾರಿ ಬಸ್ಸಿನ ಮರ್ಜಿಗೆ ಬೀಳಲೇಬೇಕು. ಆಗ ನನಗಾಗುವ ಸಂಕಟ ಉಂಟಲ್ಲ, ವರ್ಣಿಸಲಸದಳ. ವಾರ ಮೊದಲೇ ಕನಸಲ್ಲೂ ಸರ್ಕಾರಿ ಬಸ್ಸಿನ ಪ್ರಯಾಣ ನೆನಸಿಕೊಂಡು ಬೆಚ್ಚಿ ಬೀಳುತ್ತಿರುತ್ತೇನೆ. ಬಾಲ್ಯದಲ್ಲಿ ಈ ಸರ್ಕಾರಿ ಬಸ್ಸಿನ ಪ್ರಯಾಣ ತಪ್ಪಿಸಲು ನನಗೆ ರೆಕ್ಕೆ ಇದ್ದಿದ್ದರೆ, ಹಾರುವ ಚಾಪೆ ಇದ್ದಿದ್ದರೆ ಅಂತ ಕನಸು ಕಾಣುತ್ತಿದ್ದೆ.

ಅಬ್ಬಾ ಆ ಗಡಗಡ ಬಸ್ಸೇ...!? ''ಇದ್ರ್‌ಕ್ಕಿಂತ ನಮ್ ನೆರ್‌ಮನಿ ರಾಮ್‌ನ್ ಎತ್ತಿನ್ ಗಾಡಿ ಆರೂ ಬೇಗ ಹೋತ್ತ್. ಈ ಸುಟ್ಟ್ ಬಸ್ಸ್‌ಂಗೆ ಒಂದ್ ಟೇಪ್‌ರಿಕಾರ್ಡರ್ರೂ ಗತಿ ಇಲ್ಲೆ...'' ಅಂತ ಬೈದುಕೊಂಡೇ ನಾನು ದಾರಿ ಸವೆಸುವುದು.

ಅಲ್ಲಿ ಹೋಗಿ, ''ನಿಮ್ಮೂರಿದೆಂಥಾ ಬಸ್ ಮಾರಾಯ್ರೆ. ಅಯ್ಯೋ! ಬಪ್ಪುವತ್ತಿಗೆ ಸಾಕೋ ಸಾಕಾಯ್ತ್. ನಮ್ ಉಡ್ಪಿಂಗೆ (ಉಡುಪಿಗೆ) ಕಾಣ್ಕ್. ಎಷ್ಟ್ ಚಂದ್ ಚಂದದ್ ಬಸ್ಸು ಇದ್ದೋ ಗೊತ್ತೀತಾ? 'ಪೋರ್ಲುರ್ ಬಸ್ಸು' ಸ್ಪರ್ಧೆ ಮಾಡ್ಲ್‌ಕ್. ಕೆನರಾ ಪಿಂಟೋ ಬಸ್ ಎಷ್ಟು ಪಾಶ್ ಇತ್ತ್, APM ಎಂಥ ಸ್ಪೀಡಲ್ಲಿ ಹೋತ್ತ್, ದುರ್ಗಾಂಬಾ ಬಸ್ಸಲ್ಲಿ ಎಷ್ಟೆಲ್ಲಾ ಕಲರ್ ಇತ್.. ಉಡ್ಪಿ ಬಸ್ ಸ್ಟಾಂಡ್‌ಂಗ್ ನಿಂತ್ರೆ ಸಾಕ್ 'ಕುಡ್ಲ ಬಲ್ಲೆ ಬಲ್ಲೆ' 'ಬತ್ತ್ಯಾ ಕುಂದಾಪ್ರ ಕುಂದಾಪ್ರ...' 'ಹತ್ತಿ ಹತ್ತಿ' ಅಂದ್ಕಂಡ್ ಉಪ್‌ಚಾರ್ ಮಾಡಿ ಕರೀತೋ. ಆಚೆ ಕಂಡ್ ಈಚೆ ಕಾಂಬುದ್ರೊಳ್ಗೆ ಇನ್ನೊಂದ್ ಬಸ್ ಬಂದ್ ಆಯ್ತ್....

''ಬಸ್ ಒಳ್ಗ್ ಕೂಕಂಡ್ರೆ ನಿಂಗೆ ಪದ ಬೇಕಾ? ಉಪೇಂದ್ರಂದು 'ಜ್ವರ ಇಲ್ಲದೆ ಯಾಕೋ....' ಬೇಕಾ? 'ಸ್ವಾಮಿಯೇ ಶರಣಂ ಅಯ್ಯಪ್ಪ' ಬೇಕಾ? 'ಚೂಡಿದಾರದ ಪೊಣ್ಣು ಬಿಂಜಿ...' ಅಂದ್ಕಡ್ ತುಳು ಪದ ಬೇಕಾ? ಯಾವುದು ಕೇಂಬುದಾದ್ರೂ ಇತ್ತೇ... ಇಲ್ಲಿ ಕಣಂಗೆಯಾ ಮತ್ತೆ...!?'' ಅಂತೆಲ್ಲ ಒಂದಿಷ್ಟು ಸರೀ ಬೈದು ಬಸ್ಸಿನ ಮೇಲಿನ ನನ್ನ ಅಸಮಾಧಾನ ಎಲ್ಲ ಕಾರಿದ ಮೇಲೆ ನನಗೆ ಸಾಮಾಧಾನ.

ಅವರೆಲ್ಲ ನಮ್ಮೂರಿಗೆ ಬಂದಾಗ ''ಕಾಣ್ ಅದ್ ಕೆನರಾ ಪಿಂಟೋ ಬಸ್. ಬೊಂಬಾಯಿ, ಬೊಂಬಾಯಿಗ್ ಹೋಪುದ್. ಎಷ್ಟು ಶೋಕಿತ್ತ್ ಕಾಣ್ ಸಮಾ. ಈಗಲೇ ಕಾಣ್. ನಿಮ್ಮೂರ್‌ಂಗೆ ಎಲ್ಲಿತ್ತ್ ಹೀಂಗಿದ್ದ್ ಬಸ್ಸೆಲ್ಲ...'' ಅಂತ ಸರೀ ಚುಚ್ಚಿದರೇ ನನಗೆ ತೃಪ್ತಿ.

ಇನ್ನು ನನ್ನ ಬಸ್ಸು ಪ್ರಯಾಣದ ಅನುಭವಗಳು ಏನು ಕೇಳ್ತೀರಿ...!? ಕಾಲೇಜಿಗೆ ಕಾಲಿಟ್ಟ ಮೇಲೆ ನನ್ನ ಬಸ್ಸಿನ ನಿತ್ಯಂದ ''ನೀನಿಲ್ಲದೆ ನಾನಿಲ್ಲಾ ಕಣೆ'' ಎನ್ನುವ ಗಂಟು ಬೆಸೆದೇ ಬಿಟ್ಟಿತು.

ಬಸ್ಸಲ್ಲಿ ಅಜ್ಜ, ಅಜ್ಜಿ, ತಾತ, ಮುತ್ತಾತ, ಪೂರ್ವಜರ ಪುಣ್ಯಫಲದಿಂದ ಅಪರೂಪಕ್ಕೊಮ್ಮೆ ಸೀಟ್ ಸಿಕ್ಕುತ್ತಿತ್ತು. ಸಿಕ್ಕಿದರೆ ನನಗೆ 'ಬಸ್ ಕುಟುಂಬಿ ಸ್ಥಾನ' ಅಂದ್ರೆ ನಿಂತವರ ಬ್ಯಾಗ್‌ಗಳನೆಲ್ಲ ಹೊರುವ ಕಷ್ಟ. ಮಳೆಗಾಲದ ಅವಸ್ಥೆಯೋ ಒಂದು ಕೈಲಿ ಬ್ಯಾಗ್ ಮತ್ತೆ ಕೊಡೆ ಅಬ್ಬಬ್ಬಾ... ಅದರ ಮಧ್ಯದಲ್ಲಿ ಬಸ್ಸಿನಲ್ಲಿ ನೀರು ಸೋರುವುದು ಬೇರೆ. ''ಮಾಡಿಗೆ ಹುಲ್ಲ್ ಸಮಾ ಹೊಚ್ಚಲ್ಲೆ ಅಲ್ದ...'' ಅಂತ ಕಂಡಕ್ಟರನ್ನು ಕೆಣಕುವ ಕುಹಕಿಗಳು ಬೇರೆ.

ನಾನು ನನ್ನ ಖಾಸಾ ದೋಸ್ತ್ ಕುಮಾರ, ಇಬ್ಬರೂ ಈ ನಿಲ್ಲುವುದನ್ನು ತಪ್ಪಿಸಲು ಭಯಂಕರ ಯೋಜನೆ ತಯಾರೂ ಮಾಡಿದೆವು. ಕಾಲೇಜು ಬಸ್ಸು ಹಾಕುವುದರಿಂದ ಹಿಡಿದು partnershipನಲ್ಲಿ ಡಬ್ಬಲ್ ಡೆಕ್ಕರ್ ಬಸ್ಸು ಹಾಕುವವರೆಗೂ ಆಯ್ತು. ಯಾವುದಕ್ಕೂ ವಿಟಮಿನ್ "M' problem ನೋಡಿ ಅದು ಅಲ್ಲೇ ನಿಂತಿದೆ.

ಹುಡುಗರಿಗೆಲ್ಲಾ ''ಮಾರಾಯಾ ದಮ್ಮಯ್ಯ ಬೇಗ ಬಂದ್ ಹುಡ್ಗಿ ಕಂಡ್ ಮದಿ ಆಯ್, ಡೌರಿಯಂಗೆ ಒಂದ್ ಕಾರ್ ಕೇಣಿ. ಆರಾಮ್‌ದಲ್ಲಿ ಹೊಯಿಲಕ್ಕು. ಈ ಅವಸ್ಥೆ ಯಾರಿಗ್ ಬೇಕ್. ಕಾಲೇಜಿಗೆ ಹೋಪುವತ್ತಿಗೆ ನಂಗೆ ಬಂದ್ ಡ್ರಾಪ್ ಕೊಡಿ ಅಂತ ದಮ್ಮಯ್ಯ ದಕ್ಕಯ್ಯ ಹೊಡ್ದೂ ಆಯ್ತು... ಆದರೆ ಅದೆಲ್ಲ ಆಪು ಹೋಪು ಕತೆಯಾ ಮಾರಾಯ್ರೆ....?

ಇನ್ನು ನಮ್ಮ ಕಾಲೇಜಿನ ಸ್ಟಾಪ್ ಉಂಟಲ್ಲ ಅದು ಬಸ್‌ಸ್ಟ್ಯಾಂಡಿಗಿಂತ ಹಿಂದೆ. ಉಡುಪಿಯಿಂದ ಬರುವ ಬಸ್ಸು, ನಮ್ಮ ಕಾಲೇಜು ಸ್ಟಾಪ್ ಹಾದು ಬ್ರಹ್ಮಾವರ ಬಸ್‌ಸ್ಟಾಂಡ್‌ಗೆ ಹೋಗಬೇಕು. ನಾವೆಲ್ಲ ಬಸ್ಸು ಬಸ್‌ಸ್ಟ್ಯಾಂಡ್ ತಲುಪುವ ಮೊದಲೇ ಹತ್ತುತ್ತಿದ್ದರಿಂದ ಸೀಟು ಗಿಟ್ಟಿಸಿಕೊಳ್ಳುತ್ತಿದ್ದೆವು. ನಾನು ಯಾವತ್ತೂ ಕೊನೆಯಲ್ಲಿಯೇ ಹತ್ತುವವಳು. ನನಗೆ ಗ್ಯಾರಂಟಿ ಉಂಟು ಡ್ರೈವರ್ ಬದಿಯ ಆ ಕಾರ್ನ್‌ರ್ ಸೀಟು ಮಕ್ಕಳ ಸೀಟು, ಅಲ್ಲಿ ಯಾರೂ ಕೂತುಕೊಳ್ಳುವುದಿಲ್ಲ, ಅದು ನನಗೆ ಸಿಗುತ್ತೆ ಅಂತ. ಅದೆಂಥ ಮಾರಾಯ್ತಿ ಮಕ್ಳ ಕಣೆಂಗೆ ಆ ಸೀಟ್‌ಂಗ್ ಕೂಕಂಬುದಾ ಅಂದ್ರೂ, I don't.... care.....

ಇಲ್ಲಿ ಸ್ವಲ್ಪ ಕೇಳಿ ಮಾರಾಯ್ರೆ, ಮುಂದೆ ಎಂಥ ಆಯ್ತು ಅಂತ. ಈ ಕಾಲೇಜಿನ ಮಕ್ಕಳಿಗೆ ಸೀಟು ಸಿಕ್ಕುವ ರಹಸ್ಯ ಗೊತ್ತಾದ ಈ ಹೈಸ್ಕೂಲ್ ಮಕ್ಕಳು ಬಸ್ಸು ಸ್ಟಾಂಡಿಗೆ ಹೋಗುವ ಬದಲು ನಮ್ಮ ಕಾಲೇಜಿನ ಸ್ಟಾಪ್‌ಗೆ ಬರುವುದಾ ಮಾರಾಯ್ರೆ? ಮೊದಲೇ ನಮ್ಮೂರಿಗೆ ಹೋಗುವ ಬಸ್ಸು ಗಂಟೆಗೆ ಒಂದೇ. ಅದರಲ್ಲೂ (ಶಾಲೆ, ಹೈಸ್ಕೂಲ್ ಮತ್ತು ಕಾಲೇಜು) ಮಕ್ಕಳು. ಕಂಪ್ಯೂಟರ್ ಕ್ಲಾಸ್ ಮಕ್ಕಳು, ಉದ್ಯೋಗಿಗಳು, ನಿರುದ್ಯೋಗಿಗಳು, ಸಂತೆಗೆ ಹೋದವರು, ಊರಿಗೆ ಬರುವವರು ಅಬ್ಬಬ್ಬಾ ಇನ್ನು ಯಾರು ಯಾರೋ ಎಲ್ಲರೂ ಅದರಲ್ಲೇ ಸ್ಟಾಂಡ್‌ಗೆ ಹೋದರೆ ಸೀಟಿನ ಗತಿ!? CET ಯಲ್ಲಾದ್ರೂ payment ಸೀಟು ಸಿಕ್ಕೀತು, ಇಲ್ಲಿ ದೇವರೇ ಗತಿ. ಅಂಥದ್ದರಲ್ಲಿ ಅನಾಯಾಸವಾಗಿ ದೊರಕುತ್ತಿದ್ದ ಸೀಟನ್ನು ಈ ಮಕ್ಕಳು ಅತಿಕ್ರಮಣ ಮಾಡಿಬಿಡಬೇಕೆ...!?

ವಿಧಿಯನ್ನು ಹಳಿಯುತ್ತ ಕಾಲೇಜಿನ ಹಿಂದಿನ ಸಕ್ರೆ ಕಾರ್ಖಾನೆ ಸ್ಟಾಪ್‌ಗೆ ಹೋಗಿ ನಿಂತದ್ದೂ ಆಯ್ತು. ''ನಾಳೆಯಿಂದ ಉಡ್ಪಿಗೆ ಬಂದ್ ಹತ್ತಿ ಸೀಟ್ ಸಿಕ್ಕ್‌ತ್ತು'' ಅಂತ ಕ್ಲೀನರ್‌ನ ಗೇಲಿಗೆ ಒಳಗಾಗಿ ಮರ್ಯಾದೆ ಹೋದದ್ದೂ ಆಯ್ತು.

ಬರುತ್ತಿದ್ದ ಮಕ್ಕಳಲ್ಲಿ ಬಂದಿಬ್ಬರು ನನಗೆ ಪರಿಚಯದವರೂ ಇದ್ದರು. ಆ ಮಕ್ಕಳ ಅಕ್ಕನಲ್ಲಿ ಹೇಳ್ದೆ ''ನಂಗೆ ಬಸ್ಸಂಗೆ ಸಿಕ್ತಿದ್ದ್ ಸೀಟು ಈ ಮಕ್ಳ ಆಕ್ರಮಿಸಿದ್ದೋ. ನಿಮ್ಮನೆ ಮಕ್ಳಿಗೆ ಹೇಳ್ ನಾಳೆ ಕಾಲೇಜ್ ಸ್ಟಾಪ್‌ಗೆ ಬಂದ್ರೆ ನಾನ್ ಕೋಲ್ ಹಿಡ್ಕಂಡ್ ಬೆದ್ರುಸ್ತೆ ಅಂತ'' ಅಂದೆ. 'ಆಯ್ತ್ ಹೇಳ್ತೆ' ಅಂದ್ಲು. ಎಂಥ ಹೇಳ್ತೆ ಅಂದೆ ''ನಾಳೆಯಿಂದ ಇನ್ನೂ 4 ಮಕ್ಳನ್ನ ಜಾಸ್ತಿ ಕರ್ಕೊಂಡ್ ಹೋಯಿ ಕಾಲೇಜ್ ಸ್ಟಾಪ್‌ಂಗೆ ನಿಲ್ಲ್ ಅಂತೆ'' ಅಂತ ಹೇಳಬೇಕಾ? ಪಾಪಿ ಸಮುದ್ರಕ್ಕೆ ಹೋದ್ರೂ ಮೊಣಕಾಲುದ್ದ ನೀರಂತೆ.

ಬೆಳಗಿನ ನಮ್ಮ ಬಸ್ಸೋ ಆ 8-45ರ ಬಸ್ಸು ಬಿಟ್ಟರೆ ಬೇಗ ಎಂಟೂವರೆ ಅಥವಾ ಎಂಟೂಕಾಲ್‌ಗೆ ಹೋಗಬೇಕು. ಅಷ್ಟು ಬೇಗ ಹೊರಟರೂ ಬ್ರಹ್ಮಾವರದಿಂದ ಕಾಲೇಜಿನವರೆಗೆ ನಡೆಯಬೇಕು ಬೇರೆ. ನಂಗೋ ಆ 8 ಮುಕ್ಕಾಲಿನ ಬಸ್ಸೆ Altra

Super delux, vedio coach, A.C. ಬಸ್ಸು ಒಂಬತ್ತುವರೆಗೆ ಅಲ್ಲಿ Prayer bell ಆಗಲಿಕ್ಕೂ ಬಸ್ಸು ಸ್ಟಾಪಿನಲ್ಲಿ ನಿಲ್ಲಲ್ಲಿಕ್ಕೂ ಸರಿ ಆಗುತ್ತದೆ. ಪ್ರಿನ್ಸಿ ಕೆಂಗಣ್ಣು ಬಿಟ್ಟರೂ ನಾನು ನನ್ನ ಬಸ್ಸು ಬಿಡಲಾರೆ.

ಈ ಕಾಲೇಜು ರಜೆ ಕಳೆದು ಆರಂಭವಾದ ಕೂಡಲೆ ಫಸ್ಟ್ Yearಗೆ ಕಾಲೇಜಿಗೆ ಬರುವವರು ಎಷ್ಟು ಜನ ನಮ್ಮೂರಲ್ಲಿದ್ದಾರೆ ಎಂಬುವ ನನ್ನ ಲೆಕ್ಕಾಚಾರ ಶುರು. ಬಸ್ಸಲ್ಲಿ ಎಷ್ಟು ಸೀಟು ಬೇಕು ಎನ್ನುವ ದೂ...ರಾಲೋಚನೆ. ನಾನು ಅವರಿಗೆಲ್ಲ ಸೀನಿಯರ್ ಗತ್ತಲ್ಲಿ ಹೇಳುವುದುಂಟು "ಕಾಣಿ ತಡಾ ಹೋದ್ರೆ, ಪ್ರಿನ್ಸಿ ಬೈತ್ರ್. ನೀವೆಲ್ಲ 8.30 ಬಸ್ಸಂಗೆ ಹೋದ್ರೇ ಒಳ್ಳೆದ್..." ಅಂತ ಅವರನ್ನೆಲ್ಲ ಬೇಗ ಸಾಗ ಹಾಕುವ ನನ್ನ pre-plan ಹೇಗೆ!?

ಕಾಲೇಜಿಗೆ ಹೋದ್ರೆ, ನನ್ನ ತಲೆಯಲ್ಲಿ ಪೂರಾ ಬಸ್ಸಿದೇ ವಿಚಾರ. ನಾನು ಮೊದಲೇ ಎಲ್ಲಾ plan ಮಾಡಿ ಇಡುವುದು. ಇವತ್ತು 2nd ಪಿರಿಯಡ್ ಲೀಸರ್ ಇದ್ರೆ, ಎ.ಪಿ.ಎಮ್. last period leisure ಆದ್ರೆ, G.M.T. ಪ್ರತಿ ಪಿರಿಯಡ್‌ಗೂ ಯಾವ ಬಸ್ಸು ಅಂತ ನಂದು ಪೂರಾ ಲೆಕ್ಕಾಚಾರ. ಯಾವ ಬಸ್ಸು ಎಷ್ಟೊತ್ತಿಗೆ ಕಾಲೇಜ್ ಮುಂದೆ ಪಾಸ್ ಆತ್ತ್, ಯಾವ express ಬಸ್ಸಲ್ಲಿ ಹೋದ್ರೆ, ಬಸ್‌ಸ್ಟ್ಯಾಂಡಲ್ಲಿ ಬಸ್ಸು ಸಿಕ್ಕತ್ತು. ಇಂಥ ಬೇಡದಿದ್ದದ್ದು ಯಾವುದು ಎಲ್ಲಾ ನನ್ನಲ್ಲಿ ಉಂಟು.

ನನಗೆ ಈ ಬಸ್ಸಲ್ಲಿ ಕಿಟಕಿ ಹಾಕಿದ್ರೆ, ಆಗುವುದಿಲ್ಲ ತೆರೆದೇ ಇರಬೇಕು. ಒಮ್ಮೆ ಕಾರ್ಕಳಕ್ಕೆ ಬರುತ್ತಿರುವಾಗ ಸ್ವಲ್ಪ ಜೋರಾಗಿಯೇ ಮಳೆ ಬರುತಿತ್ತು. ನಾನು ಕಿಟಕಿ ತೆರೆದು ಮೊದಲ ಮಳೆಯ ಸೌಂದರ್ಯ ಸವಿ ಅನುಭವಿಸುತ್ತಾ ಕನಸಿನ ಲೋಕದಲ್ಲಿ ಇದ್ದೆ. ಈಚೆ ಕಂಡಕ್ಟರ್ ಕರೆದದ್ದೂ ಗೊತ್ತಿಲ್ಲ. ಒಮ್ಮೆ ಯಾಕೋ ಈಚೆ ತಿರುಗುತ್ತೇನೆ ಕಂಡಕ್ಟರ್ ಸಮೇತ (ಡ್ರೈವರನ್ನು ಹೊರತು ಪಡಿಸಿ. ಇಲ್ಲಾಂದ್ರೆ, ನಾನಿಷ್ಟೊತ್ತಿಗೆ C/o ಕೈಲಾಸ ಆಗಿದ್ದೆ) ಬಸ್ಸಿನಲ್ಲಿರುವ ಸಮಸ್ತ ಪ್ರಯಾಣಿಕ ಬಾಂಧವರೆಲ್ಲರೂ Zooನಿಂದ ತಪ್ಪಿಸಿಕೊಂಡು ಬಂದ ಪ್ರಾಣಿಯಂತೆ ನನ್ನನ್ನು ವೀಕ್ಷಿಸುತ್ತಿದ್ದಾರೆ. ಗೊತ್ತಾಯ್ತು ಇದು ಕಿಟಕಿ ಬಾಗಿಲಿನ ಪ್ರಭಾವ ಎಂದು. ಅವರೆಲ್ಲರೂ ಎಣಿಸಿರಬೇಕು, ಬ್ರಹ್ಮನ ಅದ್ಭುತ ಮಾನವ ಸೃಷ್ಟಿಯ ಪ್ರತಿರೂಪ ಈ ಜೀವಿ, ನಮ್ಮ ಬಸ್ಸಲ್ಲಿ ನೋಡುವ ಸೌಭಾಗ್ಯ ನಮಗೆ ಎಂದು (ಅಲ್ವಾ ಮತ್ತೆ...!? ಯಾರಿಗುಂಟು ಯಾರಿಗಿಲ್ಲ ಹೇಳಿ).

ಒಮ್ಮೆ ಬಸ್ಸಲ್ಲಿ ನನ್ನ ಸ್ಟಾಪ್ ಹತ್ತಿರ ಬರುವಾಗ ನನ್ನ ಮುಂದೆ ಕೂತ ಇಬ್ಬರು ಆಶ್ಚರ್ಯದಿಂದ, ಕುತೂಹಲದಿಂದ ಹೊರಗೆ ನೋಡುತ್ತಿದ್ದಾರೆ. ಏನೋ ತೋರಿಸಿ ನಗುತ್ತಿದ್ದಾರೆ. ನನಗೆ "ಎಲಾ! ನಮ್ಮೂರಂಗೆ ಇಸ್ಟ್ ದಿನ ಆದ್ರು ನಂಗ್ ಗೊತ್ತಿಲ್ದೆ ಇವ್‌ರಿಗೆ ಗೊತ್ತಾದ್ ಅದೆಂಥದಪ್ಪಾ ಹಾಂಗಾರೆ?" ಅಂತ. ಕಂಡ್ರೆ ಎಂಥ...!? 'ಮಂಗ' (ನಾನು ಆದ್ದೂ ಅದೇ)!?

ಪರೀಕ್ಷೆ ಸಮಯದಲ್ಲಿ ಒಮ್ಮೆ ಮಾಮೂಲಿ ಬಸ್ಸು ಬಿಟ್ಟು 2 ಬಸ್ಸು ಮೊದಲೇ ಹೊರಟಿದ್ದೆ. ಅರ್ಧ ದಾರಿಯಲ್ಲಿ ಬಸ್ಸು ಕೈ ಕೊಡಬೇಕೆ. ಬೇರೆ ಬಸ್ಸು ಅಂತೂ ಅಪೋಲೋ, ನ್ಯೂಗ್ರ್ಯಾಂಡ್ ಸರ್ಕಸ್ ಎಲ್ಲಾ ಮಾಡಿ ಹತ್ತಿದೆ. ನಂತರ ಈ ಕಂಡಕ್ಟರ್‌ನ ಗೊಣಗಾಟ ಶುರು "ಆ ಬಸ್ಸಂವ ಹಾಂಗೆ ಹೀಂಗೆ. ನಿಮ್‌ಗೆಲ್ಲ ಹಾಂಗೆ ಆಯಿಕ್. ನಿಮ್ಮನೆಲ್ಲ ನಮ್ಮ್ ಬಸ್ಸಂಗೆ ಹತ್ತಿಸ್ಕಂಬುಕೇ ಆಗ ಇದ್ದಿತ್... ಪಾಪ ಅಂತ ಬಿಟ್ಟೆ..." ಹೀಗೆ ಏನೋ ಭಾರೀ ಅನುಕಂಪ ತೋರಿದವರ ಹಾಗೆ... ನಂಗೋ ಒಂದು ಕಡೆ ಪರೀಕ್ಷೆಗೆ ತಡ ಆಗ್ತದೋ ಎಂಬ ಹೆದರಿಕೆ, ನಿಲ್ಲಲು ಕಷ್ಟ, ಅದರ ಮಧ್ಯೆ ಈ ಅವಮಾನ (ಛೇ ಛೇ ಛೇ ಈ ತರ...!? ಅಂತೀರಾ...!?)

ಒಂದು ದಿನ ಬಿಟ್ಟು ನೋಡ್ತೇನೆ, ಆ ಬೈದ ಕಂಡಕ್ಟರ್ ಬೈದಿದ್ದ ಬಸ್ಸಲ್ಲೇ ಕಂಡಕ್ಟರ್. "ಏನ್ ಮಾರ್ರೆ, ಮೊನ್ನೆ ಬೈತಿದ್ದೀರಿ ಈ ಬಸ್ಸಿಗೆ ಏನ್ ಪುರ್‌ಸೊತ್ತಿಲ್ಲೆ. ಇವತ್ತ್ ಕಂಡ್ರೆ ಈ ಬಸ್ಸಂಗೆ ಇದ್ರಿ... ಅಂತ. ಜನ ಮಾತಾಡಿದ್ದರೆ ಕೇಳಿ. ಮುಯ್ಯಿಗೆ ಮುಯ್ಯಿ ಹೇಗೆ!?(ಹ್ಹುಹ್ಹುಹ್ಹಿಹ್ಹಿ).

ನಮ್ಮ ಬಸ್ಸಿನ ಕ್ಲೀನರ್ ಇದ್ದಾನಲ್ಲ, ಅವನೋ ವಿದೂಷಕ ಮಹಾಶಯ. ಅವನಲ್ಲಿ ಯಾರಾದ್ರು ಬಂದು ಬಸ್ಸು ಹೋಗದೇ ಇದ್ದ ರೂಟಿನ ಊರಿಗೆ ಹೋಗುತ್ತಾ ಎಂದು ಕೇಳಿದ್ರೆ, ಅವನಿಗೆ ಸಸೂತ್ರದಲ್ಲಿ 'ಇಲ್ಲ' ಅನ್ನುವ ಅಭ್ಯಾಸವೇ ಇಲ್ಲ. "ಇಲ್ದೇ, ಈಗ ನಾವು ಹೋತಿಲ್ಲೆ. ನಮ್‌ಗೆ ಅಲ್ಲ್ ಕಲೆಕ್ಷನ್ ಆತಿಲ್ಲೆ. ಅದ್ಕೆ ಟ್ರಿಪ್ ನಿಲ್ಲಿಸ್ಸಿತ್" ಅಂತ ಸರಾಗ ಸುಳ್ಳು ಬಿಟ್ಟಾಯ್ತು. 'ಹೌದಾ' ಅಂತ ಗೊತ್ತಿದ್ದ ನಾವೂ

ಬೆಪ್ಪರಾಗಬೇಕು.

ಈ ಬಸ್ಸಿಗೆಲ್ಲ ಪೈಪೋಟಿ ಜಾಸ್ತಿ ನೋಡಿ ಕೆಲವೊಮ್ಮೆ ಒಟ್ಟೊಟ್ಟಿಗೆ ಹೋಗುವುದೂ ಉಂಟು. ಆಗ ಇವನು ಹೇಳುವುದು ಉಂಟು ''ಮಾರಾಯಾ ನಾಳೆಯಿಂದ ನಮ್ಮ ಬಸ್ಸಿಗೂ ನಿಮ್ ಬಸ್ಸಿಗೂ ಬಂದು ಹಗ್ಗ ಕಟ್ಕೊಂಡೇ ಹೋಪ. ನಮ್‌ಗ್ ಡೀಸೆಲ್ ಆದ್ರೂ ಉಳಿತ್ತ್ ಮಾರಾಯಾ... ಮತ್ತೆಂಥ ಇಷ್ಟು ತಡಾ ಹೋಪುದಾ?'' ಅಂತ.

ನಂಗೆ ಒಂದು ಮಹದಾಸೆ ಇದೆ. 'ಎಂಥದಪ್ಪಾ' ಅಂತ ಕೇಳ್ತೀರಾ....? ಒಂದು ದಿನ , ಒಂದು ಸರ್ತಿ ಬಸ್ಸಲ್ಲಿ ಫುಟ್‌ಬೋರ್ಡ್‌ನಲ್ಲಿ ನೇತಾಡುತ್ತಾ ಹೋಗಬೇಕು ಅನ್ನೋ ಆಸೆ, ತೀವ್ರ ಆಸೆ ಉಂಟು ಮಾರಾಯ್ರೆ. ಹಾಗಂತ ಹೇಳಿದ್ದಕ್ಕೆ ನನ್ನ ಖಾಸಾ ದೋಸ್ತ್‌ನಿಂದ ಬಂತಲ್ಲ ಸಲಹೆ ''ಹೋಪು ದಿನ ಹೇಳಿ ಹೋಗ್, ಬಸ್ಸಿನ್ ಹಿಂದಿದ ನಾನ್ ಅಂಬುಲೆನ್ಸ್‌ತತ್ತೆ'' ಅಂತ.

ಆದ್ರೂ ನನ್ನ ಆಸೆ ತೀರಿಲ್ಲ. ಹಾಗೆ ಹೋಗಿ ಬಂದು ಮತ್ತೆ ನನ್ನ experience ನ್ನು explain ಮಾಡ್ತೇನೆ ಸರಿಯಾ? ಬಾಯ್...

●

# ಕತ್ತೆ ಕತ್ತೆಯಾಗಿದ್ದರೇ ಕ್ಷೇಮ....

**ಒಂ**ದು ಊರಿನಲ್ಲಿ ಒಬ್ಬ ಅಗಸ. ಅವನ ಹತ್ತಿರ ಒಂದು ಕತ್ತೆ, ಒಂದು ನಾಯಿ ಇದ್ದವು.

ಕತ್ತೆ ಕೊಳೆಬಟ್ಟೆಗಳನ್ನು ಕೆರೆಗೆ ಹೊತ್ತುಕೊಂಡು ಹೋಗುತ್ತಿತ್ತು. ಒಗೆದ ಬಟ್ಟೆಗಳನ್ನು ಕೆರೆಯಿಂದ ಹೊತ್ತುಕೊಂಡು ಬರುತ್ತಿತ್ತು.

ಕೆರೆಯ ಹತ್ತಿರ ಬಟ್ಟೆಗಳನ್ನು ಯಾರೂ ಎತ್ತಿಕೊಂಡು ಹೋಗದ ಹಾಗೆ, ಮನೆಯೊಳಕ್ಕೆ ಕಳ್ಳರು ಯಾರೂ ನುಗ್ಗದ ಹಾಗೆ ನಾಯಿ ಕಾವಲಿರುತ್ತಿತ್ತು.

ಹೀಗೆ ಕತ್ತೆಗೂ ನಾಯಿಗೂ ಕರ್ತವ್ಯಗಳನ್ನು ಹಂಚಿ, ಅಗಸ ನಿಶ್ಚಿಂತೆಯಿಂದ ಇರುತ್ತಿದ್ದ.

ಒಂದು ರಾತ್ರಿ ಹನ್ನೆರಡು ಗಂಟೆ. ಅಗಸನ ಮನೆಯ ಮುಂದೆ ಕತ್ತೆಯೂ ನಾಯಿಯೂ ನಿದ್ರೆ ಬಂದು ಬಿದ್ದಿದ್ದವು.

ಇದ್ದಕ್ಕಿದ್ದ ಹಾಗೆ ರಸ್ತೆಯ ಮೂಲೆಯಲ್ಲಿ ಯಾರದೋ ಮಾತು ಕೇಳಿಸಿತು. ಚಪ್ಪಲಿಯ ಸದ್ದಾಯಿತು. ಕತ್ತೆಗೂ ನಾಯಿಗೂ ಎಚ್ಚರವಾಯಿತು. ಎರಡೂ ಕಿವಿಗಳನ್ನು ನಿಗುರಿಸಿ ಆಡಿಸಿದುವು.

ಯಾರೋ ಕಳ್ಳರು ಬರುತ್ತಿರುವ ಹಾಗಿದೆ!' ಎಂದಿತು ಕತ್ತೆ.

'ಕಳ್ಳರಲ್ಲವೆ ಕತ್ತೆ! ನಮ್ಮ ಮನೆಯ ಯಜಮಾನರು ಆ ಮೂರನೇ ಮನೆ ಯಜಮಾನರ ಹತ್ತಿರ ಮಾತಾಡುತ್ತಿದ್ದಾರೆ. ಅಷ್ಟು ಗೊತ್ತಾಗೊಲ್ವೆ ನಿನಗೆ?' ಎಂದಿತು ನಾಯಿ.

'ಏ ನಾಯಿ! ನಿನಗಿಂತ ನನಗೆ ಕಿವಿ ಉದ್ದ ಅನ್ನೋದು ಗೊತ್ತಿಲ್ಲವೋ! ಅವರು ಕಳ್ಳರಲ್ಲದೇ ಹೋದರೆ, ಅದು ಯಾಕೆ ಅಲ್ಲಿ ನಿಂತುಕೊಂಡು ಪಿಸಪಿಸ ಅಂತ ಮಾತಾಡಬೇಕು?' ಎಂದಿತು ಕತ್ತೆ.

'ಪಿಸ ಪಿಸ ಅಂತ ಮಾತಾಡದೆ, ನೀನು ಕೂಗಿದ ಹಾಗೆ ಕೂಗಿಕೊಂಡರೆ, ಇಲ್ಲಿಯ ಮನೆಗಳಲ್ಲಿ ಮಲಗಿರೋವರ ನಿದ್ರೆ ಏನಾಗಬೇಕು? ಆದಕ್ಕೇ ಕತ್ತೆ ಬುದ್ಧಿ ಅನ್ನೋದು! ಅದೂ ಅಲ್ಲದೆ, ನೀನು ಉದ್ದ ಕಿವಿ ಇಟ್ಟುಕೊಂಡು ಏನು ಪ್ರಯೋಜನ? ನನಗಿರೋ ಹಾಗೆ ಇರಬೇಕು ಮೂಗು! ಆಗ ತಿಳಿಯುತ್ತೆ. ವಾಸನೆಯಿಂದ ಮನೇವರು ಯಾರು, ಹೊರಗಿನವರು ಯಾರು ಅಂತ' ಎಂದಿತು ನಾಯಿ.

'ಶುದ್ಧ ಕೃತಘ್ನ ನೀನು! ಅನ್ನ ಹಾಕಿದ ಮನೆಗೆ ಕನ್ನ ಹಾಕಿಸೋವನು! ಸ್ವಲ್ಪವಾದರೂ ಸ್ವಾಮಿಭಕ್ತಿ ಇಲ್ಲ! ಅದೋ... ಇಲ್ಲೇ ಮನೆಯ ಹತ್ತಿರವೇ ಬರುತ್ತಿದ್ದಾರೆ ಕಳ್ಳರು!' ಅಂತ ಕತ್ತೆ ಒಂದೇ ಉಸಿರಿಗೆ ಕೂಗಿಕೊಂಡಿತು.

ಅಗಸ ಆಗತಾನೇ ಮನೆಗೆ ಬರತಾ ಇದ್ದವನು ಕೈಯ ಕೋಲಿಂದ ನಾಲ್ಕು ಬಾರಿಸಿ ಅದರ ಬಾಯಿ ಮುಚ್ಚಿಸಿದ.

●

ಬಿಸಿಂಗ ಬಿಡಿ

# ಗೋಕುಲ ನಿರ್ಗಮನ: ಮುರಳಿಯ ಮೋಹನ ಗಾನವದೆಲ್ಲಿ ?

❑ ಉಷಾ ಕಟ್ಟೇಮನೆ

**ಕ**ನ್ನಡ ರಂಗಭೂಮಿ ಇತಿಹಾಸದಲ್ಲಿ ಗೀತ ನಾಟಕಗಳ ಪ್ರಯೋಗ ಆಗಿದ್ದು ತುಂಬಾ ಕಡಿಮೆ. ಅದರ ಪ್ರಯೋಗಕ್ಕೆ ಬೇಕಾದ ಅಗತ್ಯಗಳು ಬೇರೆಯೇ ತೆರನಾಗಿರುವುದು ಇದಕ್ಕೆ ಕಾರಣ.

ಗೀತ ನಾಟಕವೆಂದರೆ ಗೀತೆಗಳಿಂದಲೇ ಕ್ರಿಯೆಯು ನಡೆಯುವ ನಾಟಕ. ಇಲ್ಲಿ ನಾಟಕೀಯ ಘಟನೆಗಳಿಗಿಂತ ಸಾಹಿತ್ಯ, ಕಾವ್ಯ ಮತ್ತು ಸಂಗೀತಗಳೇ ಪ್ರಧಾನ ಪಾತ್ರ ವಹಿಸುತ್ತವೆ. ಹಾಗೂ ಇದರಲ್ಲಿ ಅಭಿನಯದ ಜೊತೆಗೆ ಸಂಗೀತ ಜ್ಞಾನವೂ ಕಲಾವಿದರಿಗೆ ಅತ್ಯಗತ್ಯ. ಸ್ವಲ್ಪ ಮಟ್ಟಿನ ನೃತ್ಯದ ಅರಿವು ಕೂಡಾ. ನಿರ್ದೇಶಕನಿಗೆ ಇದೆಲ್ಲದರ ಮೇಳೈಸುವಿಕೆ ಸಾಧ್ಯವಾದರೆ ಆ ಪ್ರಯೋಗ ಯಶಸ್ವಿಯಾಗುತ್ತದೆ.

ತೆಲುಗು, ತಮಿಳು, ಬಂಗಾಲಿ ಭಾಷೆಗಳಲ್ಲಿ ಗೀತ ನಾಟಕಗಳು ಇದ್ದರೂ ಕನ್ನಡದಲ್ಲಿ ಇವುಗಳ ಸಂಖ್ಯೆ ಜಾಸ್ತಿ. ಒಂದು ರೀತಿಯಲ್ಲಿ ಭಾರತೀಯ ಸಾಹಿತ್ಯ ಪರಂಪರೆಗೆ ಗೀತ ನಾಟಕಗಳು ಕನ್ನಡದ ವಿಶಿಷ್ಟ ಕೊಡುಗೆ. ಪು.ತಿ.ನ. ಎರಡೇ ಗೀತ ನಾಟಕಗಳನ್ನು ಬರೆದರೂ ಅವರ ಹೆಸರು ಇದರಲ್ಲಿ ದೊಡ್ಡದು. ಮೇಲುಕೋಟೆಯ ಈ ಕವಿ ಕೃಷ್ಣನ ಅನನ್ಯ ಭಕ್ತ. ಭಕ್ತಿಪರಂಪರೆಯ ಮುಂದುವರಿಕೆಯ ಭಾಗ ಇವರ ಕಾವ್ಯಸೃಷ್ಟಿ.

'ಗೋಕುಲ ನಿರ್ಗಮನ' 1949ರಲ್ಲಿ ಪು.ತಿ.ನ. ಬರೆದ ಎರಡನೆಯ ಗೀತನಾಟಕ. 'ಅಹಲ್ಯೆ' 1941ರಲ್ಲಿ ಪ್ರಕಟವಾಗಿತ್ತು.

ಭಾರತೀಯ ರಂಗಭೂಮಿ ಇತಿಹಾಸದಲ್ಲಿ ಕಾರಂತರದು ದೊಡ್ಡ ಹೆಸರು. ಅವರ ನಾಟಕಗಳಲ್ಲಿ ಸಂಗೀತವೇ ವಿಜೃಂಭಿಸುತ್ತದೆ. ಅದರಲ್ಲೂ ಜಾನಪದ ವಾದ್ಯ ಸಂಗೀತ ಮತ್ತು ಜಾನಪದ ಮಟ್ಟುಗಳು ಯಾವಾಗಲೂ ಮುನ್ನೆಲೆಯಲ್ಲಿ ಇರುತ್ತವೆ. ಹೊಸ ಹೊಸ ಪ್ರಯೋಗಗಳಿಗೆ ಅವರು ಸದಾ ಮುಂದಾಗುತ್ತಾರೆ. ಇಂತಹ ಕಾರಂತರು ಪು.ತಿ.ನ.ರವರ 'ಗೋಕುಲ ನಿರ್ಗಮನ'ವನ್ನು ನೀನಾಸಂ ತಿರುಗಾಟಕ್ಕಾಗಿ ಹತ್ತು ವರ್ಷಗಳ ಹಿಂದೆ ನಿರ್ದೇಶಿಸಿದ್ದರು. ಅದು ಯಶಸ್ವಿಯಾಗಿ ನೂರೈವತ್ತಕ್ಕೂ ಹೆಚ್ಚಿನ ಪ್ರದರ್ಶನವನ್ನು ಕಂಡಿತ್ತು.

ಇದೇ ಕಾರಂತರು ಹುಟ್ಟು ಹಾಕಿದ್ದ 'ಬೆನಕ' ನಾಟಕ ತಂಡ ಈಗ 'ಗೋಕುಲ ನಿರ್ಗಮನ'ವನ್ನು ಮತ್ತೆ ರಂಗದ ಮೇಲೆ ತಂದಿದೆ. ನಿರ್ದೇಶಕರು ಟಿ.ಎಸ್.ನಾಗಾಭರಣ. ಈಗ ಸಿನೆಮಾ ಮತ್ತು ಕಿರುತೆರೆಯೆಡೆ ತಮ್ಮ ಗಮನವನ್ನು ಬಹುಮಟ್ಟಿಗೆ ಕೇಂದ್ರೀಕರಿಸಿರುವ ನಾಗಾಭರಣ ರಂಗಭೂಮಿಯಲ್ಲಿ ನಟರಾಗಿ, ನಿರ್ದೇಶಕರಾಗಿ ಒಂದು ಕಾಲದಲ್ಲಿ ಹೆಸರು ಮಾಡಿದವರು.

ಹಲವಾರು ಪುನರ್ ಪ್ರದರ್ಶನಗಳನ್ನು ಕಂಡ ನಾಟಕವೊಂದನ್ನು ಇನ್ನೊಬ್ಬ ನಿರ್ದೇಶಕ ಕೈಗೆತ್ತಿಕೊಂಡಾಗ

ಆತನ ಸವಾಲು ಮತ್ತು ಜವಾಬ್ದಾರಿ ಹೆಚ್ಚು. ಅಲ್ಲಿ ತನ್ನ ಸೃಜನಶೀಲತೆಯನ್ನು ಆತ ತೋರಬೇಕಾಗುವುದು ಅನಿವಾರ್ಯ. ಈ ದೃಷ್ಟಿಯಿಂದ ನೋಡಿದರೆ ಹಳೆಯ ಪಾತ್ರಧಾರಿಗಳ ಬದಲು ಹೊಸ ನಟ ನಟಿಯರು ಕಾಣಸಿಕೊಂಡಿದ್ದಾರೆ ಅಷ್ಟೇ. ಕಾರಂತರ ಪ್ರಯೋಗದ ಯಥಾವತ್ ಕಾಪಿ ಇದು. ನಾಗಾಭರಣರ ಉದ್ದೇಶ ಅದೇ ಇದ್ದಿರಬಹುದೋ ಏನೋ ಗೊತ್ತಿಲ್ಲ.

ತಮಗೆ ಒಪ್ಪಿಸಿದ ಕೆಲಸವನ್ನು ಈ ಪಾತ್ರ ಧಾರಿಗಳು ಅಚ್ಚುಕಟ್ಟಾಗಿಯೇ ನಿರ್ವಹಿಸಿದ್ದಾರೆ. ಶ್ರೀಕೃಷ್ಣ ಪಾತ್ರ ಧಾರಿ ಮೈಕೋ ಮಂಜುನಾಥ್ ತುಂಟ ಕೃಷ್ಣನಾಗಿ, ಮುರಳಿ ಲೋಲನಾಗಿ ಪಾತ್ರಕ್ಕೆ ಶಕ್ತಿ ಮೀರಿ ಜೀವ ತುಂಬಿದ್ದಾರೆ. ಆದರೆ ಅವರಿಗೆ ಸರಿಜೋಡಿಯಾಗಿ ಪಾತ್ರ ವಹಿಸಲು ರಾಧೆಯಾಗಿ ಅಭಿನಯಿಸಿದ ವಿದ್ಯಾ ವೆಂಕಟರಾಂಗೆ ಸಾಧ್ಯವಾಗಿಲ್ಲ. ರಾಧೆಯದು ಅರ್ಪಣಾ ಭಾವ. ಅದಕ್ಕೆ ಮುಗ್ಧ ಮುಖಭಾವದ ನಟಿ ಬೇಕು.



ಇಲ್ಲಿ ಒಂದು ವಿಷಯವನ್ನು ಗಮನಿಸಬೇಕು. 'ಗೋಕುಲ ನಿರ್ಗಮನ'ದಲ್ಲಿ ಅಭಿನಯಿಸಿದ ಹೆಚ್ಚಿನ ಎಲ್ಲಾ ನಟ ನಟಿಯರು ಕಿರುತೆರೆಯಲ್ಲಿ ತೊಡಗಿಸಿಕೊಂಡವರು (ಅದವರಿಗೆ ಬದುಕಿನ ಹಾದಿ). ಹಾಗಾಗಿ ಪ್ರೇಕ್ಷಕರ ಮನಸ್ಸಿನಲ್ಲಿ ಅವರ ಪಾತ್ರಗಳು ಸೂಪರ್ ಇಂಪೋಸ್ ಆಗುತ್ತಿದ್ದವು. ಮುಕ್ತವಾಗಿ ನೋಡುವುದು ಕಷ್ಟವಾಗುತ್ತಿತ್ತು.

ಬಲರಾಮನಾಗಿ ಪೂರ್ಣಚಂದ್ರ ತೇಜಸ್ವಿ, ಅಕ್ರೂರನಾಗಿ ಟಿ.ಎನ್.ಗಿರೀಶ್ ಕಿರುತೆರೆಯ ಹ್ಯಾಂಗೋವರ್‌ನಿಂದ ಸಂಪೂರ್ಣವಾಗಿ ಬಿಡಿಸಿಕೊಂಡಂತಿತ್ತು. ಅಲ್ಲಲ್ಲಿ ಚದುರಿ ಹೋಗಿದ್ದ ಈ ನಟ ನಟಿಯರನ್ನು ಬೆನಕ ಮತ್ತೆ ರಂಗಭೂಮಿಗೆ ಎಳೆದು ತಂದಿದೆ. ಈ ಎಳೆಯ ಕಲಾವಿದರು ಅಲ್ಲಿ ಇಲ್ಲಿ ಎರಡು ಕಡೆಯೂ ಹೊಂದಾಣಿಕೆ ಮಾಡಲು ಪ್ರಯತ್ನಿಸುತ್ತಿದ್ದಾರೆ.

'ಬೆನಕ'ದ ಕಿರಿಯ ತಲೆಮಾರು ಹಿರಿಯರ ಯಶಸ್ವಿ ನಾಟಕಗಳನ್ನು ಮತ್ತೆ ರಂಗದ ಮೇಲೆ ಪ್ರದರ್ಶಿಸುವ ಸಿದ್ಧತೆಯಲ್ಲಿದೆ. ಇದು ಒಂದು ರೀತಿಯಲ್ಲಿ ಸ್ವಾಗತಾರ್ಹವೇ ಆದರೂ ಹಿರಿಯರ ನೆರಳಿನಿಂದ ಈಚೆ ಬರುವ ಪ್ರಯತ್ನ ಒಳ್ಳೆಯದು. ಮುಂದಿನ ದಿನಗಳಲ್ಲಿ ಹಯವದನ, ಸಂಗ್ಯಾಬಾಳ್ಯ, ಜೋಕುಮಾರ ಸ್ವಾಮಿ ಪ್ರದರ್ಶನ ಕಾಣಲಿವೆ. ಹಿಂದಿನ ನಾಟಕಗಳಿಗೆ ಅವರು ಕಾಯಕಲ್ಪ ಮಾಡದಿದ್ದರೆ ಏನನ್ನೂ ಸಾಧಿಸಿದಂತಾಗುವುದಿಲ್ಲ. ಒಂದು ಕೃತಿ ಕಾಲದ ನಿಕಷಕ್ಕೆ ಸಿಕ್ಕಿ ಹೊಳಪುಗೊಳ್ಳುತ್ತಲೇ ಇರಬೇಕು. ಮೊದಲ ಬಾರಿಗೆ 'ಗೋಕುಲ ನಿರ್ಗಮನ'ವನ್ನು ಹೊಳಪುಗೊಳಿಸಿದವರು ಬಿ.ವಿ.ಕಾರಂತರು. ಅದರ ಸಾರ ಸರ್ವಸ್ವವನ್ನೆಲ್ಲಾ ಹೀರಿ ಅದನ್ನು ರಂಗದ ಮೇಲಿನ ದೃಶ್ಯಕಾವ್ಯವಾಗಿಸಿದರು. ಜನರ ಹತ್ತಿರ ತಂದರು. ಜನರು ಪು.ತಿ.ನ.ರನ್ನು, ಅವರ ಬರವಣಿಗೆಯನ್ನು ಮುಖ್ಯವಾಗಿ 'ಗೋಕುಲ ನಿರ್ಗಮನ'ವನ್ನು ಮತ್ತೊಮ್ಮೆ ಪುಟ ತಿರುಗಿಸಿ ನೋಡುವಂತಾಯಿತು.

ಗೋಕುಲ ನಿರ್ಗಮನವನ್ನು ಈಗ ನೀನಾಸಂನವರು ಆಡುತ್ತಿಲ್ಲ. ಆದರೆ ಅವರು ಅದನ್ನು ವೀಡಿಯೋ ಚಿತ್ರೀಕರಣ ಮಾಡಿ ಕಾಯ್ದಿರಿಸಿಕೊಂಡಿದ್ದಾರೆ. ಈ ಬಾರಿಯ ನೀನಾಸಂ ಸಂಸ್ಕೃತಿ ಶಿಬಿರದಲ್ಲಿ ಅದನ್ನು ವ್ಯಾಖ್ಯಾನ, ವಿಮರ್ಶೆ

ಗಳೊಂದಿಗೆ ಪ್ರದರ್ಶಿಸಲಾಯಿತು. ಅಲ್ಲಿಯ ಶಿಬಿರಾರ್ಥಿಗಳು ಅದನ್ನು ಮಂತ್ರಮುಗ್ಧರಾಗಿ ವೀಕ್ಷಿಸಿದರು. ಭಾವುಕರಾಗಿ ಅದರ ಚರ್ಚೆಯಲ್ಲಿ ಪಾಲ್ಗೊಂಡರು.

ಒಂದು ರಂಗ ಪ್ರಯೋಗದ ಫಲಶ್ರುತಿಯ ಬಗ್ಗೆ ಬೇರೆ ಬೇರೆ ಜನರಲ್ಲಿ ಬೇರೆ ಬೇರೆ ಅಭಿಪ್ರಾಯಗಳಿರಬಹುದು. ಆದರೆ ಗೋಕುಲ ನಿರ್ಗಮನದ ಪ್ರದರ್ಶನ ನೀಡುವ ಅನುಭವ ಅಲೌಕಿಕವಾದುದು. ಅದು ನಮ್ಮ ಭಾವಲೋಕದ ಮೃದು ಮಧುರವಾದ ಭಾವನೆಗಳನ್ನು ಮೀಟುವುದರ ಜೊತೆಗೆ ಯಾವುದೋ ಅಲೌಕಿಕವಾದುದರ ಕಡೆಗೂ ನಮ್ಮ ಲಕ್ಷ್ಯವನ್ನು ಸೆಳೆಯುತ್ತದೆ.

ಗೀತ ನಾಟಕಗಳ ಯಶಸ್ಸು ಇರುವುದೇ ಇಲ್ಲಿ. ವಾಸ್ತವದಿಂದ ದೂರ ಸರಿದಷ್ಟೂ ಭಾವಲೋಕ ಶ್ರೀಮಂತಗೊಳ್ಳುತ್ತದೆ.

ಗೋಕುಲ ನಿರ್ಗಮನಕ್ಕೆ ಇನ್ನೊಮ್ಮೆ ಸಾಣೆ ಹಿಡಿಯುವ ಸಂದರ್ಭ ನಾಗಾಭರಣರಿಗೆ ಒದಗಿ ಬಂದಿತ್ತು. ಆದರೆ ಅವರು ಅದರೆಡೆ ಗಮನ ಹರಿಸಲಿಲ್ಲ. ಅಂದು ಸ್ವಾತಂತ್ರ್ಯಪೂರ್ವದಲ್ಲಿ ಪು.ತಿ.ನ.ರವರು ಗೊಲ್ಲತಿಯ ಭಾವ ತಳೆದು ಗೋಕುಲ ನಿರ್ಗಮನವನ್ನು ಬರೆದಂತೆ ಇಂದು ಈ ಕಾಲಘಟ್ಟದಲ್ಲಿ ನಿಂತು ಆ ಗೋಕುಲದ ಪಾತ್ರಧಾರಿಗಳ ಪರಕಾಯ ಪ್ರವೇಶ ಮಾಡಿ ಅವರ ಮನಸ್ಸು ಬಗೆದಿದ್ದರೆ ಹೊಸ ವ್ಯಾಖ್ಯಾನಗಳು ದೊರೆಯುತ್ತಿದ್ದವೇನೋ.

ಕಳೆದ ವರ್ಷ ಸುರೇಶ್ ಆನಗಳ್ಳಿಯವರು ಮೇಘದೂತವನ್ನು ಎಡಪಂಥೀಯ ದೃಷ್ಟಿಕೋನದಿಂದ ನೋಡಿ ರಂಗದ ಮೇಲೆ ತಂದಿದ್ದರು. ಒಬ್ಬ ವ್ಯಕ್ತಿಯ ಭಾವಲೋಕದ ವಿವರಗಳಿಗೆ ಹೊಸ ವ್ಯಾಖ್ಯಾನವನ್ನು ನೀಡುವ ಪ್ರಯತ್ನ ಸಾಧ್ಯವಾಗುವುದಾದರೆ ಗೋಕುಲ ನಿರ್ಗಮನದಂತಹ ಹಲವು ಆಯಾಮದ ಕೃತಿಗೆ ಯಾಕೆ ಸಾಧ್ಯವಾಗಲಾರದು?

ಕನ್ನಡ ಪ್ರಸಿದ್ಧ ವಿಮರ್ಶಕರಾದ ಡಾ.ಡಿ.ಆರ್. ನಾಗರಾಜ್‌ರವರು ಗೋಕುಲ ನಿರ್ಗಮನದಲ್ಲಿ ಧರ್ಮ-ಕಾಮದ ಸಂಘರ್ಷವನ್ನು ಕಂಡಿದ್ದಾರೆ. ಕೊಳಲನ್ನು ಜೀವ ಕಾಮದ ಸಂಕೇತವಾಗಿ ನೋಡಿದ್ದಾರೆ. ಇನ್ನು ಕೆಲವರು ಗ್ರಾಮ ಸಂಸ್ಕೃತಿ ಮತ್ತು ನಗರ ಸಂಸ್ಕೃತಿಯ ಸಂಘರ್ಷವನ್ನು ಇಲ್ಲಿ ಕಂಡಿದ್ದಾರೆ. ಕಿ.ರಂ.ನಾಗರಾಜ್‌ರವರು ಗೋಕುಲದ ಪರಿಸರದಲ್ಲಿ ತಾಯ್ತನ, ಹೆಣ್ತನದ ಭಾವವನ್ನು ಕಂಡಿದ್ದಾರೆ.

ಈ ಕಾಲಘಟ್ಟದಲ್ಲಿ ನಿಂತು ನೋಡಿದರೆ ಹೆಣ್ಣು ಜೀವವೊಂದಕ್ಕೆ ಈ ಕೃತಿ ಪ್ರಕೃತಿ ಪುರುಷರ ನಡುವಿನ ನಿರಂತರ ಆಕರ್ಷಣೆ ಮತ್ತು ವಿಯೋಗದ ಸ್ಥಾಯೀ ಭಾವವಾಗಿ ಕಾಣುತ್ತದೆ. ರಾಧೆ ಆ ನಿರಂತರ ಪ್ರೇಮದ ಮೂರ್ತ ರೂಪ . ಅದು ಅಲೌಕಿಕವಾದುದು. ಆಕೆಯಲ್ಲಿರುವ ಅರ್ಪಣಾ ಭಾವಕ್ಕೆ ಲೌಕಿಕದ ಯಾವ ಕಟ್ಟುಪಾಡುಗಳೂ ಇಲ್ಲ. ಈ ಭಾವದಲ್ಲಿ ಆಕೆಯ ಸಖಿಯರೂ ಪಾಲ್ಗೊಳ್ಳುತ್ತಾರೆ. ಗೋಪಾಲಕರೂ ಸೇರಿದಂತೆ ಇಡೀ ನಂದಗೋಕುಲ ಭಾಗಿಯಾಗುತ್ತದೆ. ಸಾಮೂಹಿಕ ಅರ್ಪಣಾಭಾವ.

ಎಲ್ಲವನ್ನೂ ಸ್ವೀಕರಿಸಿ ತನ್ನಲ್ಲಿ ಕಾಪಿಡುವ ಪ್ರಕೃತಿ, ಒಂದು ಹಂತದವರೆಗೆ ಮಾತ್ರ ಆಕೆಯಲ್ಲಿ ಜೀವಶಕ್ತಿ ತುಂಬಿ ನಂತರ ನಿರ್ಗಮಿಸುವ ಪುರುಷ ಇಂದಿಗೂ ಆಧುನಿಕ ಸ್ತ್ರೀಯರನ್ನು ಕಾಡುವ ನಿಗೂಢ. ಸಂಸಾರದಲ್ಲಿ ಇದ್ದುಕೊಂಡೇ ಅದರಿಂದ ಬಿಡುಗಡೆಗಾಗಿ ಹಂಬಲಿಸುವ ಆಕೆಗೆ ಮುರಳಿಗಾನ ಬದುಕನ್ನು ಮುನ್ನಡೆಸುವ ಶಕ್ತಿ.

ಇಷ್ಟೆಲ್ಲಾ ಸಾಧ್ಯತೆಗಳು, ಆಳ ವಿಸ್ತಾರಗಳನ್ನೊಳಗೊಂಡ ಕೃತಿಯನ್ನು ಒಂದು ರಮ್ಯ ಕಥಾನಕವಾಗಿಸಿ ದೃಶ್ಯ ಕಾವ್ಯವಾಗಿಸಿದ್ದಾರೆ ಬಿ.ವಿ.ಕಾರಂತರು. ನಾಗಾಭರಣ ಇದರಲ್ಲಿರುವ ಧ್ವನಿಶಕ್ತಿಯನ್ನು ಗುರುತಿಸಿ ಹೊಸ ವ್ಯಾಖ್ಯಾನವನ್ನು ನೀಡುವ ಪ್ರಯತ್ನ ಮಾಡಬಹುದಿತ್ತು. ಆದರೆ ಅದು ಒಂದು 'ಸಿಂಡ್ರೆಲ್ಲಾ' ಶೋದ ಮಟ್ಟಕ್ಕಷ್ಟೇ ಸೀಮಿತಗೊಂಡಿದೆ.

●

---

**ಉಷಾ ಕಟ್ಟೇಮನೆ**
ನಂ.50, 10ನೇ ಕ್ರಾಸ್, 1ನೇ ಹಂತ, 3ನೇ ಫೇಸ್,
ಚಂದ್ರಾ ಲೇಔಟ್, ವಿಜಯನಗರ, ಬೆಂಗಳೂರು - 40

# ಸಾಕುಪ್ರಾಣಿ

ಉಮಾದೇವಿ ಅಂತರ್ಜನಂ
ಕನ್ನಡಕ್ಕೆ: ಕೆ. ಕೆ. ಗಂಗಾಧರನ್

**ಈ** ದಿನ ಸಂಬಳ ದಿನ.

ಆಫೀಸಿನಿಂದ ರುಜು ಹಾಕಿ ಪಡೆದುಕೊಂಡ ನೋಟುಗಳನ್ನು ತನ್ನ ವ್ಯಾನಿಟಿಬ್ಯಾಗಿನ ಸಣ್ಣ ಕವಾಟದೊಳಗೆ ಭದ್ರವಾಗಿಸಿ ದೊಡ್ಡ ಕವಾಟದೊಳಗೆ ಊಟದ ಡಬ್ಬಿಯನ್ನು ತಳ್ಳಿ, ಮದುವೆಯಲ್ಲಿ ಕೊಟ್ಟ ಗಲ್ಫ್ ಛತ್ರಿಯನ್ನು ಠಕ್ಕನೆ ಅರಳಿಸಿ, ಹೊಸ ಸೀರೆಯ ನೆರಿಗೆಗಳನ್ನು ನಾಜೂಕಾಗಿ ಒಟ್ಟು ಸೇರಿಸಿ, ಮೈ ತುಂಬಾ ಸೆರಗನ್ನು ಹೊದ್ದು ಲೋಯರ್ ಡಿವಿಜನ್ ಕ್ಲರ್ಕ್ ಕಮ್ ಟೈಪಿಸ್ಟ್ ಲೀಲಾವತಿ ಆಫೀಸಿನ ಮೆಟ್ಟಿಲುಗಳನ್ನಿಳಿದು ಜಿನುಗುತ್ತಿರುವ ಮಳೆಯಲ್ಲಿ ಸೇರಿಕೊಂಡಳು.

ಸುತ್ತಮುತ್ತಲಿನ ಪರಿಸರವನ್ನು ಗಮನಿಸದೆ, ಮಳೆ ಗಾಳಿಯನ್ನು ಲೆಕ್ಕಿಸದೆ ಲೀಲಾವತಿ ತನ್ನ ಗಂಡನ ಮನೆಯತ್ತ ಚುರುಕಾಗಿ ಹೆಜ್ಜೆ ಹಾಕತೊಡಗಿದಳು.

ಲೀಲಾವತಿಯ ಮದುವೆಯಾಗಿ ಕೇವಲ ಆರೇಳು ದಿನಗಳಾಗಿವೆಯಷ್ಟೆ. ಸಂತೋಷದಿಂದಿದ್ದ ಆಕೆ ಸಂಬಳ ಪಡೆದಾಕ್ಷಣ ಚಿಂತೆಗೀಡಾದಳು.

ಮಗಳನ್ನು ನೋಡಲು ಅಪ್ಪ ಹಿಂದಿನ ದಿನವೇ ಬಂದಿದ್ದರು. ಹೊಸ ಮನೆಯ ವಾತಾವರಣಕ್ಕೆ ಮಗಳು ಹೊಂದಿಕೊಂಡಿರಬಹುದೇ ಎಂದು ತಿಳಿಯುವ ಕಾತರ ಹೆತ್ತವರಿಗಿರುವುದು ಸಹಜ. ಆದರೆ ಲೀಲಾವತಿಗೆ ಗೊತ್ತು, ತಂದೆ ಬಂದಿರುವ ಕಾರಣವೇ ಬೇರೆ ಎಂದು.

ಈ ದಿನ ಸಂಬಳದ ದಿನ.

ಕೆಲವೇ ದಿನಗಳ ಹಿಂದೆ ಅಪ್ಪ ಅಲ್ಲಿಂದಿಲ್ಲಿಂದ ಸಾಲ ಮಾಡಿ ತನ್ನ ಮದುವೆಯ ಶಾಸ್ತ್ರ ಮುಗಿಸಿದ್ದರು.

ಮದುವೆಯ ಹಿಂದಿನ ದಿನ ಅಪ್ಪ - ಅಮ್ಮನ ನಡುವೆ ನಡೆದ ಖಾಸಗಿ ಸಂಭಾಷಣೆ ಲೀಲಾವತಿ ಆಲಿಸಿದ್ದಳು.

''ಇಪ್ಪತ್ತೈದನೇಯ ತಾರೀಖಿಗಲ್ಲವೆ ಮದುವೆ. ಈ ತಿಂಗಳ ಸಂಬಳಾನೂ ನಾವೇ ತಗೋಂಬಿಟ್ಟು ಸಣ್ಣಪುಟ್ಟ ಸಾಲಗಳನ್ನು ತೀರಿಸಿ ಬಿಡೋಣ. ಏನಂತೀಯಾ?'' ಅಪ್ಪ ಅಮ್ಮನ ಅಭಿಪ್ರಾಯ ಕೇಳುತ್ತಿದ್ದರು.

''ಅದಕ್ಕೆ ಅವಳ ಗಂಡನ ಮನೆಯವರು ಒಪ್ಪಬೇಕಲ್ವೇನ್ರಿ.ಮದುವೆಯಾದ ಮೇಲೆ ಅವಳ ಸಂಪಾದನೆಯಲ್ಲಿ ನಮಗೇನಿದೇರಿ ಹಕ್ಕು? ಅವಳಿಗೊಂದು ಕೆಲಸಾಂತ ಇರೋದ್ರಿಂದ ವರದಕ್ಷಿಣೆ ಇಲ್ಲದೇನೇ ಮದುವೆ ಮಾಡ್ಕೊಳ್ತಾ ಇದ್ದಾರೆ. ಅಷ್ಟೇ ಸಾಲದೆ?''

ಸ್ವಲ್ಪ ಹೊತ್ತಿನ ಮೌನದ ನಂತರ ಅಪ್ಪ ನುಡಿದಿದ್ದರು.

''ಹಾಗಾದರೆ ಒಂದ್ಕೆಲಸ ಮಾಡೋಣ. 26 ನೇಯ ತಾರೀಖಿನಿಂದ 30 ರವರೆಗಿನ ಐದು ದಿನದ ಸಂಬಳ ಅವರು ತಗೊಂಡು ಮಿಕ್ಕಿದ್ದು ನಮಗೆ ಕೊಡಲಿ. ಅಲ್ವೆ?''

ಕೇಳುತ್ತ ನಿಂತಿದ್ದ ಲೀಲಾವತಿಗೆ ಜೇನ್ನೊಣ ಕಚ್ಚಿದಂತಾಯಿತು.

ಕೇಳಿಸಿಕೊಂಡಿದ್ದಳು.

''ಅಮ್ಮಾ, ನಾಳೆ ಲೀಲಾಗೆ ಸಂಬಳ, ಅದರಲ್ಲೇ ಕಳುಹಿಸಿದ ರಾಯಿತು'' ಎಂದಿದ್ದರು ತನ್ನ ಗಂಡ.



ತಂದೆ ನಿನ್ನೆಯೇ ಬಂದು ಕುಳಿತಿದ್ದಾರೆ. ಗಂಡ ಮನಿ ಯಾರ್ಡರ್ ಫಾರ್ಮ್ ಭರ್ತಿ ಮಾಡಿ ಇಟ್ಟಿದ್ದಾರೆ. ಈಗ ತಾನೇನು ಮಾಡಲಿ? ತನ್ನ ತಿಂಗಳ ದುಡಿತದ ಪ್ರತಿಫಲ ವಾಗಿ ಸಿಕ್ಕಿದ ಈ ನೋಟು ಹಾಗೂ ಚಿಲ್ಲರೆಗಳನ್ನು ತಾನು ಯಾರಿಗೆ ಕೊಡಲಿ? ತಂದೆಯ ಆರ್ಥಿಕ ಪರಿಸ್ಥಿತಿ ಲೀಲಾವತಿಗೆ ಗೊತ್ತು. ಹಾಗೆಂದು ಈ ಹಣವನ್ನು ಅವರಿಗೆ ಒಪ್ಪಿಸಿದರೆ ಗಂಡನಿಗೆ ಏನು ಹೇಳಲಿ? ಹೊಸ ಅಕ್ಕಿಯಲ್ಲೇ ಕಲ್ಲು ಸಿಕ್ಕಿದರೆ...

ಹಿಂದೆ ಯಾರೋ ನುಡಿದಿದ್ದರು.

ತಂದೆ ಬಾಲ್ಯದಲ್ಲೂ, ಗಂಡ ಯೌವ್ವನದಲ್ಲೂ, ಮಕ್ಕಳು ಮುಪ್ಪಿನಲ್ಲೂ ಹೆಣ್ಣನ್ನು ರಕ್ಷಿಸಬೇಕಂತೆ. ಅವಳು ಸ್ವಾತಂತ್ರ್ಯಕ್ಕೆ ಅರ್ಹಳಲ್ಲವಂತೆ.

ತಾನಿಂದು ಎರಡು ಮನೆಯವರ ಸಾಕು ಪ್ರಾಣಿಯಾಗಿದ್ದೇನೆ. ಹೆಣ್ಣೆಂದರೆ ಸಾಕುಪ್ರಾಣಿಯೆ? ಇಂದು ಸಂಬಳ ದಿನ. ತನ್ನ ದುಡಿಮೆಯ ಪ್ರತಿಫಲ ವನ್ನು ಯಾವ ಯಜಮಾನನಿಗೆ ನೀಡಲಿ? ಯೋಚಿ ಸುತ್ತಿದ್ದ ಲೀಲಾವತಿ ಬೀಸುತ್ತಿದ್ದ ಗಾಳಿ, ಮಳೆಯಿಂದ ರಕ್ಷಣೆ ಪಡೆಯಲು ಗಲ್ಫ್ ಛತ್ರಿಯಿಂದ ಫಾರಿನ್ ಸೀರೆಯ ಸೆರಗಿನಿಂದ ತನ್ನ ಸುತ್ತ ಕೋಟೆಕಟ್ಟಲು ವೃಥಾ ಶ್ರಮ ನಡೆಸುತ್ತಾ ಮುಂದೆ ಮುಂದೆ ನಡೆದಳು.

ಮದುವೆಯಾದ ನಂತರ ಲೀಲಾವತಿಯ ಬದುಕಿನಲ್ಲಿ ಹೆಚ್ಚಿನ ಮಾರ್ಪಾಡುಗಳೇನೂ ಆಗಲಿಲ್ಲ. ವ್ಯತ್ಯಾಸವಾಗಿದ್ದು ಎರಡು ವಿಷಯಗಳಲ್ಲಿ ಮಾತ್ರ. ಮದುವೆಗೆ ಮೊದಲು ಆಫೀಸು ತಲುಪಲು 10 ಕಿಲೋ ಮೀಟರು ಬಸ್ಸಿನಲ್ಲಿ ಪ್ರಯಾಣಿಸ ಬೇಕಿತ್ತು. ಈಗ 3 ಕಿ.ಮೀ ಮಾತ್ರ. ಹಗಲು ಹಳೆಯದೇ.. ರಾತ್ರಿ ಮಾತ್ರ ಗಂಡನ ಬೆಚ್ಚನೆಯ ಅಪ್ಪುಗೆಯಲ್ಲಿ ಬೆಳಗಾಗುತ್ತಿತ್ತು.

ಇಂದು ಮದುವೆಯ ನಂತರದ ಮೊದಲ ಸಂಬಳದ ದಿನ.

ಗಂಡನ ಮನೆಯವರು ಈಗಾಗಲೇ ತನ್ನ ಸಂಬಳದ ಹಣವನ್ನು ತಮ್ಮ ಲೆಕ್ಕಕ್ಕೆ ಜಮಾ ಮಾಡಿ ಕೊಂಡು ಬಿಟ್ಟಿದ್ದಾರೆ. ದೂರದ ನಗರದಲ್ಲಿ ಓದು ತ್ತಿರುವ ಕಿರಿಯ ಮಗನಿಗೆ ಹಣ ಕಳುಹಿಸಬೇಕೆಂದು ತನ್ನ ಅತ್ತೆ ತನ್ನ ಗಂಡನಿಗೆ ಹೇಳುವುದನ್ನು ಲೀಲಾವತಿ

**ಕೆ.ಕೆ. ಗಂಗಾಧರನ್,**
ಸಿಟಿ ಆರ್.ಎಂ.ಎಸ್., ರೈಲ್ವೆ ನಿಲ್ದಾಣದ ಬಳಿ,
ಬೆಂಗಳೂರು - 560 023.

ಡಾ. ಉಲ್ಲಾಸ್ ಕಾರಂತ್

# ಇಂಥದ್ದೇ ಕಲಿ ಎಂದು ಅವರೆಂದಿಗೂ ನನಗೆ ಹೇಳಿದ್ದಿಲ್ಲ



ನನ್ನ ಅಪ್ಪನ ಹಸ್ತಾಕ್ಷರ ಸುಂದರವಾಗಿರಲಿಲ್ಲ. ಓದೋಕೆ ತುಂಬಾನೇ ಕಷ್ಟವಾಗಿತ್ತು.

ಅವರು ಸದಾ ಬರವಣಿಗೆಯ ಗುಸುಗಿನಲ್ಲಿಯೇ ಮುಳುಗಿರುತ್ತಿದ್ದವರಲ್ಲ. ಅದನ್ನೊಂದು ದಿನನಿತ್ಯದ ಕೆಲಸದ ಮಾದರಿಯಲ್ಲೇ ಕೈಗೊಳ್ಳುತ್ತಿದ್ದರು. ಒಮ್ಮೆ ಕುಳಿತು ಅರ್ಧ ಗಂಟೆ ಬರೆದರೆಂದರೆ ಅನಂತರ ಮಾಮೂಲಿ. ಬೇರೆ ಕೆಲಸಗಳಲ್ಲಿ ತಲ್ಲೀನರಾಗಿಬಿಡುತ್ತಿದ್ದರು.

ಬೆಳಗ್ಗೆ ಸುಮಾರು 5.30ರ ಸಮಯದಲ್ಲಿ ಎದ್ದು ಸ್ನಾನ ಮಾಡಿ ಒಂದು ಗಂಟೆ ಬರೆಯುತ್ತಿದ್ದರು. ನಂತರ ನೇರವಾಗಿ ಹೋಗುತ್ತಿದ್ದುದು ಪುತ್ತೂರಿನ ಪೇಟೆಗೆ. ಅಲ್ಲಿ ಬಂದಿರೋ ಟಪಾಲು ಸಂಗ್ರಹಿಸಿ ವಾಪಸು ಮನೆಗೆ. ಪುನಃ ಸ್ನಾನ. ಊಟ ಮಾಡಿ ಸ್ವಲ್ಪ ಹೊತ್ತು ನಿದ್ರೆ. ಪುನಃ ಬರವಣಿಗೆ. ಸಂಜೆ ಮತ್ತೆ ವಾಕ್. ಪೇಟೆಯಲ್ಲಿ ಶ್ರೀಧರ ಭಟ್ಟ ಬ್ರದರ್ಸ್, ಕಲ್ಯಾಣಪುರ ಭವಾನಿಶಂಕರ್‌ರಾವ್, ಟಿ.ನಾಗೇಶ್‌ರಾವ್ ಮುಂತಾದವರ ಜತೆ ಹರಟೆ. ಸಂಜೆ ಮನೆಗೆ ವಾಪಸಾಗುವಾಗ ಕೈಯಲ್ಲಿ ಟೈಮ್ಸ್ ಆಫ್ ಇಂಡಿಯಾ. ಬೆಳಗ್ಗೆ ಪತ್ರಿಕೆ ಸಿಗುತ್ತಿರಲಿಲ್ಲ. ಸಂಜೆ ವೇಳೆಗೆ ಬರುತ್ತಿತ್ತು. ಅದನ್ನು ಸಂಜೆ ವಾಕ್‌ನಿಂದ ಮರಳುವಾಗ ಬಗಲಲ್ಲಿ ತರುವುದು ಅವರ ನಿತ್ಯಾಭ್ಯಾಸ.

ನನ್ನಪ್ಪ 1963ರ ಸುಮಾರಿನಲ್ಲಿ ಬೆಳಗ್ಗಿನ ವಾಕಿಂಗ್‌ಗೆ ವಿರಾಮ ಹೇಳಿದರು. ಸಂಜೆ ವಾಕಿಂಗ್ ಇತ್ತು.

ನನ್ನಪ್ಪನಲ್ಲಿ ಒಂದು ದೌರ್ಬಲ್ಯ ಎನ್ನುವುದಕ್ಕಿಂತ ಅವರಲ್ಲಿರದ ಗುಣವೆಂದರೆ ಮನುಷ್ಯರನ್ನು ಅರ್ಥೈಸಿಕೊಳ್ಳುವ ಬಗೆ. ಹತ್ತು ವರ್ಷ ಒಳ್ಳೆಯವನಾದವ ಒಮ್ಮೆಲೆ ಯಾವುದೋ ಮಾತಿಗೆ ಕೆಟ್ಟವನಾಗಿಬಿಡುತ್ತಿದ್ದ. ಗುಡುಗು ಸ್ವಭಾವ. ಸರಿ ಮತ್ತು ತಪ್ಪುಗಳನ್ನು ತೂಗಿನೋಡುವ ವಿಧಾನ ತಿಳಿದಿರಲಿಲ್ಲ. ಅಡಿಕೆ ಕದ್ದವ ಮತ್ತು ಆನೆ ಕದ್ದವರಿಬ್ಬರನ್ನೂ ಒಂದೇ ತಕ್ಕಡಿಯಲ್ಲಿ ನಿಲ್ಲಿಸುತ್ತಿದ್ದರು.

ನಾನು ಕೇವಲ 18 ವರ್ಷದವರೆಗೆ ಮಾತ್ರ ಅವರ ಬಳಿ ಇದ್ದದ್ದು. ತರುವಾಯ ಎಂಜಿನಿಯರಿಂಗ್‌ಗೆ ಮಂಗಳೂರಿಗೆ ಹೋದೆ. ಅದರವರೆಗೆ ಒಂದು ಬಾರಿ ಹೊಡೆತ ತಿಂದ ನೆನಪಿದೆ. ಜಿಯಾಗ್ರಾಫಿಕಲ್ ಪತ್ರಿಕೆಯ ಕೆಲವು ಚಿತ್ರಗಳನ್ನು ಹರಿದು ಆಟಕ್ಕೆ ಬಳಸಿಕೊಂಡದ್ದಕ್ಕೆ ಅಪ್ಪ ಚೆನ್ನಾಗಿಯೇ ಬಾರಿಸಿದ್ದರು. ಅವರು ವಿಪರೀತ ಮುದ್ದು ಮಾಡಿದವರಲ್ಲ. ಅವರು ನಮ್ಮನ್ನು ಎಂದೂ ಪುಸ್ತಕ ಓದುವಂತೆ ಒತ್ತಾಯಿಸಿದವರಲ್ಲ. ಆಗಲೇ ನಮ್ಮ ಮನೆಗೆ ಸಾಕಷ್ಟು ವನ್ಯಜೀವಿ, ಅರಣ್ಯ ಕುರಿತು ಒಳ್ಳೊಳ್ಳೆ ಪುಸ್ತಕಗಳು ಬರುತ್ತಿದ್ದವು. ಅರ್ಥವಾಗದ್ದನ್ನು ಓದಿ ವಿವರಿಸುತ್ತಿದ್ದರು. ನನಗೆ ಜಿಮ್ ಕಾರ್ಬೆಟ್‌ರಂಥವರ ಪುಸ್ತಕಗಳ ಬಗ್ಗೆ ಪ್ರೀತಿ ಬೆಳೆಸಿದ್ದೇ ಅವರು. ನನ್ನಕ್ಕನಿಗೆ

**ಕಡಲ ತೀರದ ಭಾರ್ಗವ ಡಾ.ಶಿವರಾಮ ಕಾರಂತ ಅವರ ಬಗ್ಗೆ ಅವರ ಪುತ್ರ, ಡಾ.ಉಲ್ಲಾಸ್ ಕಾರಂತರ ಕೆಲವು ನೆನಪುಗಳು. 'ವಿಜಯ ಕರ್ನಾಟಕ'ದಲ್ಲಿ ಪ್ರಕಟವಾದ ಸಂದರ್ಶನವೊಂದರಿಂದ ಇದನ್ನು ಆರಿಸಿಕೊಳ್ಳಲಾಗಿದೆ.**

ಮತ್ತು ನನಗೆ ಓದಿನಲ್ಲಿ ಆಸಕ್ತಿ. ಕೊನೆಯ ತಂಗಿ ನೃತ್ಯಾಸಕ್ತಿಯವಳು. ವ್ಯವಸ್ಥಿತ ಅಧ್ಯಯನಕ್ಕೆ ಸದಾ ಅಪ್ಪನ ವಿರೋಧ ಇದ್ದೇ ಇತ್ತು.

ಎಂದಿಗೂ ನನಗೆ ಇಂಥದ್ದೇ ಕಲಿ ಎಂದು ಹೇಳುತ್ತಿರಲಿಲ್ಲ. ಎಂಜಿನಿಯರಿಂಗ್ ಓದುವಾಗ ವ್ಯಕ್ತಪಡಿಸಿದ ಸಂತೋಷವೇ 'ಪ್ರಾಕೃತಿಕ ಇತಿಹಾಸ'ದ ಕಡೆ ವಾಲಿದಾಗಲೂ ಇತ್ತು. ಸಾಗರ ಹೊಳೆಯಲ್ಲಿ ಹುಲಿಗೆ ರೇಡಿಯೋ ಕಾಲರ್ ತೊಡಿಸಿದಾಗಲೂ ಹುಲಿಯನ್ನು ಹತ್ತಿರದಿಂದ ಕಂಡ ಖುಷಿ ಅವರನ್ನು ಆವರಿಸಿತ್ತು. ಹಿಂದೆ ಯಾವಾಗಲೋ ಕುದುರೆಮುಖದಲ್ಲಿ ಹುಲಿಯನ್ನು ಕಂಡದ್ದು ಬಿಟ್ಟರೆ ಮತ್ತೆ ಅಂಥ ಪ್ರಸಂಗವನ್ನು ನೆನಪಿಸಿಕೊಳ್ಳುತ್ತಿರಲಿಲ್ಲ. ನನ್ನ ಕೆಲಸ ಅವರಿಗೆ ತೃಪ್ತಿ ತಂದುಕೊಟ್ಟದ್ದು ನನಗೂ ಖುಷಿ.

ತಂತ್ರಜ್ಞಾನದ ಪರವಾಗಿದ್ದ ನನ್ನ ತಂದೆ ಗಾಂಧಿಯವರ ಸಿದ್ಧಾಂತದ ಬಗ್ಗೆ ವಿಶ್ವಾಸ ಹೊಂದಿರಲಿಲ್ಲ. ಆದರೆ 1980ರಲ್ಲಿ ಕೈಗಾ ಮುಂತಾದವುಗಳ ವಿರುದ್ಧ ಚಳವಳಿ ಕೈಗೊಂಡದ್ದು ಆಕಸ್ಮಿಕ. ಸಾಂಪ್ರದಾಯಿಕ ಸಿದ್ಧಾಂತಗಳ ಬಗ್ಗೆ ಆಕ್ಷೇಪ ಮನೋಭಾವದ ಅವರು ಬ್ರೆಜಿಲ್‌ನ ಬೆಳವಣಿಗೆ ಕಂಡು ಅಭಿವೃದ್ಧಿ ಬಗ್ಗೆ ಒಲವು ತೋರಿದರು. ಚಳವಳಿಗಳಲ್ಲಿ ತೊಡಗಿಸಿಕೊಂಡದ್ದು, ಚುನಾವಣೆಗೆ ನಿಂತು ಸೋತದ್ದು ಎಲ್ಲಾ ಇತಿಹಾಸ.

ನನ್ನಪ್ಪನನ್ನು ಪರಿಸರವಾದಿ ಎನ್ನುವುದಕ್ಕಿಂತಲೂ ಪರಿಸರಪ್ರೇಮಿ ಎನ್ನುವುದೇ ಸರಿ. ನಾನೊಬ್ಬ ಸಾಹಿತ್ಯ ವಿಮರ್ಶಕನಲ್ಲ. ಆದರೆ ಅವರ ಕಾದಂಬರಿಗಳಲ್ಲಿ ವ್ಯಕ್ತವಾಗುತ್ತಿದ್ದ ಪರಿಸರದ ಕುರಿತ ಸ್ವೋಪಜ್ಞ ನಿಲುವು, ಸ್ನಿಗ್ಧ ಪ್ರೇಮ ಅನನ್ಯ. ಅದು ಕಲ್ಪನೆಯ ಕಾನನವಲ್ಲ. ಅನುಭವದ ಕಾಡು. ದಿನಾ ಪ್ರಕೃತಿಯ ನಡುವೆ ಬೆಳೆಯುತ್ತಾ ಅರಗಿಸಿಕೊಂಡ ವನ್ಯಸಿರಿ-ಸಂಪತ್ತು. ಅವರ 'ಕುಡಿಯರ ಕೂಸು', 'ಬೆಟ್ಟದ ಜೀವ' ಓದಿದರೆ ಇದು ಗೊತ್ತಾಗುತ್ತದೆ.

ಅವರು ಪ್ರಕೃತಿಯನ್ನು ಭಾವನಾತ್ಮಕ ನೆಲೆಯಲ್ಲಿ ನೋಡುವುದಕ್ಕಿಂತಲೂ ಅನುಭವಾತ್ಮಕ ನೆಲೆಯಲ್ಲಿ ಭಟ್ಟಿ ಇಳಿಸಿದವರು. ನನ್ನಪ್ಪ ಬಿಟ್ಟರೆ ಆಲನಹಳ್ಳಿ, ಕೃಷ್ಣ, ಪೂರ್ಣಚಂದ್ರ ತೇಜಸ್ವಿ, ಕುವೆಂಪು ಅವರ 'ಮಲೆಗಳಲ್ಲಿ ಮದುಮಗಳು' ಕೃತಿಯಲ್ಲಿ ಈ ತೆರನಾದ ಆರ್ದ್ರತೆ ಕಾಣಬಹುದು.

ಇದಕ್ಕೆ ಕಾಳಜಿ ಎನ್ನುವುದು ಸೂಕ್ತವಲ್ಲ. ಕಾಳಜಿಯಲ್ಲಿ ಯಾಂತ್ರಿಕತೆಯಿದೆ. ಇದು ಹುಟ್ಟಿನಿಂದಲೇ ಮೂಡಿಬರುವ ಒಲವು. ಅಂತರಂಗದ ತುಡಿತಕ್ಕೆ ಸಮಾನ. ಪ್ರೀತಿಸಬೇಕು ಎಂಬುವ ಮಿಡಿತ.

ಅಪ್ಪ ಕೇವಲ ಕಾದಂಬರಿಕಾರರಾಗಿ ನನಗೆ ಕಾಣುವುದಿಲ್ಲ. ಒಬ್ಬ ವಿಶ್ವಕೋಶವಾಗಿ, ಪರಿಸರ ಪ್ರೇಮಿಯಾಗಿ ಕಾಣುತ್ತಾರೆ. ಜತೆಗೆ ಮುಂಗೋಪಿ ಅಪ್ಪನಾಗಿ ಸಹ. ಅಂದಿನ ಸಾಮಾಜಿಕ ಚಿತ್ರಣ ನೀಡುವಂಥ 'ಹಳ್ಳಿಯ ಹತ್ತು ಸಮಸ್ತರು' ಕೃತಿ ಬಹಳ ಆಪ್ಯಾಯಮಾನವಾದದ್ದು. ಶೆಟ್ಟರು, ಸೀತಾ ಐತಾಳ್ ಮತ್ತಿತರರ ಬಗ್ಗೆ ಸಾದ್ಯಂತವಾಗಿ ವಿವರಿಸುವುದರ ಜತೆಗೆ ಕೋರ್ಟ್- ಕಟಕಟೆ ಎಲ್ಲದರ ಬಗ್ಗೆಯೂ ಬೆಳಕು ಬೀರುತ್ತಾ ಹೋಗುತ್ತದೆ.

ಯಕ್ಷಗಾನಕ್ಕೆ ಹೊಸ ತಿರುವು ನೀಡುವ ಮೂಲಕ ಬದಲಾಗುತ್ತಿರುವ ಅಭಿರುಚಿಗೆ ಸ್ಪಂದಿಸಿದವರು. ರಾತ್ರಿಯಿಡೀ ನಡೆಯುತ್ತಿದ್ದ ಬಯಲಾಟ ಇಂದಿಗೆ ಕಷ್ಟಸಾಧ್ಯ ಎಂಬುದನ್ನು ಅರಿತು ಸಾಂದ್ರಗೊಳಿಸಿ ಕೆಲವೇ ಗಂಟೆಗೆ ಸೀಮಿತಮಾಡಿ ಸಾಗರೋತ್ತರ ದರ್ಶನ ದೊರಕಿಸಿಕೊಟ್ಟರು. ಅವರ 'ಯಕ್ಷರಂಗ'ದ ಆರಂಭದ ಚಟುವಟಿಕೆಗಳನ್ನು ನೋಡಿದ್ದೇನೆ. ಮೊದ ಮೊದಲು ಈ ಬಗ್ಗೆ ಜನರ ವಿರೋಧ ವ್ಯಕ್ತವಾಗಿದ್ದರೂ ಅಪ್ಪ ತಲೆ ಕೆಡಿಸಿಕೊಂಡಿರಲಿಲ್ಲ. ಅವರ ಪ್ರಯೋಗಶೀಲ ಮನೋಭಾವದ ಮತ್ತೊಂದು ಮಜಲು ಅದು.

1955ರಲ್ಲಿ ಬಡಗುತಿಟ್ಟಿನ ಶೈಲಿಯ ಹಾರಾಡಿ ರಾಮನ ಕುಣಿತ ಕಂಡಿದ್ದೆ. ಅದೂ ದೊಂದಿಯಲ್ಲಿ ನೋಡಿದ ಅನುಭವ. ಅನಂತರ ಹೆಚ್ಚು ಯಕ್ಷಗಾನ ನೋಡಿಲ್ಲ. ಈಗ ಹವ್ಯಾಸಿ ವೇಷಧಾರಿಗಳು ಹಾಗೂ ಮೇಳಗಳು ಇನ್ನೂ ಪಾರಂಪರಿಕ ವೇಷಗಳನ್ನು ಉಳಿಸಿಕೊಂಡಿರುವುದನ್ನು ನೋಡಿದರೆ ನನ್ನಪ್ಪನ ಶ್ರಮ ಸ್ವಲ್ಪ ಮಟ್ಟಿಗಾದರೂ ಫಲಕೊಟ್ಟಿದೆ ಎಂಬ ತೃಪ್ತಿಯಿದೆ.

●

# ಕಿಟೆಲ್ ಬರೆದ ಕನ್ನಡ ಕವಿತೆಗಳು

ರೆ. ಫರ್ಡಿನಾಂಡ್ ಕಿಟೆಲ್ ಕ್ರಿ.ಶ.1853ರ ಕೊನೆಯಲ್ಲಿ ನಮ್ಮ ನಾಡಿಗೆ ಬಂದರು. ಆ ಮುಂದಿನ 8-9 ವರ್ಷಗಳಲ್ಲಿ ಹಳಗನ್ನಡ ಕಾವ್ಯಗಳನ್ನೂ ಸಂಸ್ಕೃತ ಶಾಸ್ತ್ರಗ್ರಂಥಗಳನ್ನೂ ಸ್ವಯಂ ಅಭ್ಯಸಿಸಿದರು.

ಅವರ ಸಾಹಿತ್ಯಿಕ ಕಾರ್ಯ ಕನ್ನಡ ಕಾವ್ಯ ರಚನೆ ಮತ್ತು ಸಂಪಾದನೆಗಳಲ್ಲಿ ಕಂಡು ಬಂದಿದೆ. ಕೇಶಿರಾಜನ 'ಶಬ್ದ ಮಣಿದರ್ಪಣ' ಮತ್ತು ನಾಗವರ್ಮನ 'ಛಂದೋಂಬುಧಿ'- ಇವನ್ನು ಸಂಪಾದಿಸಿ ಶಾಸ್ತ್ರೀಯ ಗ್ರಂಥ ಸಂಪಾದನ ಕಾರ್ಯದ ಅಡಿಗಲ್ಲನ್ನು ಹಾಕಿದರೆಂಬುದು ಒಪ್ಪಿತವಾದ ವಿಷಯ.

ಅನಂತರ ಸುಮಾರು 19 ವರ್ಷಗಳ ಕಾಲ ಕನ್ನಡ-ಇಂಗ್ಲಿಷ್ ನಿಘಂಟುವಿನ ರಚನೆಯಲ್ಲಿ ತೊಡಗಿ, ಕನ್ನಡಕ್ಕೆ ಶಾಶ್ವತ ಸ್ವರೂಪದ ಶಬ್ದಕೋಶವನ್ನು ಒದಗಿಸಿದರು (1894). ಅದಕ್ಕೆಂದೇ ಅವರಿಗೆ ಟ್ಯೂಬಿಂಗೆನ್ ವಿಶ್ವವಿದ್ಯಾಲಯವು ಗೌರವ ಡಾಕ್ಟರೇಟನ್ನಿತ್ತು ಗೌರವಿಸಿತು.

ಕನ್ನಡ ಕವಿತೆಯಲ್ಲಿ ಅವರಿಗೆ ಮೊದಲಿನಿಂದಲೂ ಆಳವಾದ ಆಸಕ್ತಿ. ಹಳಗನ್ನಡ ಪದ್ಯಗಳುಳ್ಳ ಎರಡು ಸಂಕಲನಗಳನ್ನು ಟಿಪ್ಪಣಿ-ಶಬ್ದಾರ್ಥಗಳೊಂದಿಗೆ, ನೂರಾರು ನಿರ್ದಿಷ್ಟ ವಿಷಯಗಳ ಪ್ರಕಾರ ವಿಂಗಡಿಸಿ ಪ್ರಕಟಿಸಿದರು.

ನನಗೆ ದೊರೆತಿರುವ ಹೊಸಗನ್ನಡದ ಕವಿತೆಗಳು ಅಕಸ್ಮಾತ್ತಾಗಿ ದೊರೆತವುಗಳು. ಮೂವತ್ತು ವರ್ಷಗಳ ಹಿಂದೆಯೇ ಕಿಟೆಲ್ಲರ ಜೀವನ ಚರಿತ್ರೆ ಮತ್ತು ಕೃತಿ-ಸೂಚಿಯನ್ನು ರಚಿಸಿ, ಬೇರೆ ಲೇಖನಗಳನ್ನೂ ಬರೆದೆನಾದರೂ ಅವರ ಪಠ್ಯಪುಸ್ತಕಗಳನ್ನು ಗಮನಿಸಿರಲಿಲ್ಲ. ಅವರ 'ಕನ್ನಡ ಮೂರನೆಯ ಪುಸ್ತಕ'ವು ವಾಚನಮಾಲೆಯಾಗಿದ್ದು, ಅದರಲ್ಲಿಯ ಗದ್ಯ ಪಾಠಗಳ ಸುರುವಿಗೆ ಗಾದೆಯ ಮಾತುಗಳನ್ನೂ ಒಂದೊಂದು ಬಿಡಿ ಕವಿತೆಯನ್ನೂ (ಸ್ವತಂತ್ರವಾಗಿ ರಚಿಸಿ) ಕೊಟ್ಟಿದ್ದಾರೆ. ಕವಿತೆಯನ್ನು ರಚಿಸುವ ಅವರ ಹವ್ಯಾಸ ಎಷ್ಟೆಂದರೆ, 'ಇಂಗ್ಲಂಡ್ ದೇಶದ ಚರಿತ್ರೆ,' ಎಂಬ ಅನುವಾದಿತ ಇತಿಹಾಸ ಪುಸ್ತಕದಲ್ಲಿಯೂ ಒಂದು ನುಡಿ ಬಂದಿದೆ.

ಕಿಟೆಲ್ ಕ್ರೈಸ್ತ ಮತೀಯ ಪದ್ಯಗಳನ್ನೂ ರಚಿಸಿದ್ದಾರೆ. ಆದರೆ ಅವುಗಳ ಸಂಖ್ಯೆ ಉಳಿದ ಮಿಶನರಿಗಳ ರಚನೆಗಿಂತ ತೀರ ಕಡಿಮೆ (20-25 ಮಾತ್ರ).

ದೇವರ ಮಹಿಮೆಯಲ್ಲಿ ಕಿಟೆಲ್ಲರಿಗೆ ಅನನ್ಯವಾದ ಶ್ರದ್ಧೆ. ಅದಕ್ಕೆ ಅವರು ಕೊಟ್ಟ ದೃಷ್ಟಾಂತಗಳಲ್ಲಿಯೂ ಹೊಸತನ ಕಾಣಬಹುದು.

ಅಂದಹಾಗೆ ಕಿಟೆಲ್ಲರೂ ಐದಾರು ಲೌಕಿಕ ಭಾವದ ಕವನಗಳನ್ನು ಜರ್ಮನ್ ಭಾಷೆಯಿಂದ ಅನುವಾದಿಸಿದ್ದಾರೆ. ಆದರೆ ಅವು ಯಾವುವೂ ನೇರ ಅನುವಾದಗಳಾಗಿರದೇ, ನಮ್ಮ ಪರಿಸರ-ಪರಿಸ್ಥಿತಿಗೆ ಅನುಗುಣವಾಗಿ ಮಾರ್ಪಾಟು ಮಾಡಿದ್ದಾರೆ. Was its desdeutschen Vaterland - ಎಂಬ ಜರ್ಮನ್ ದೇಶದ ವರ್ಣನೆ 'ಸ್ವದೇಶ ಯಾವದೆಲವೋ? ಕರ್ನಾಟಕವೊ? ಮಲಾದ್ರಿಯೊ?' ಎಂದು ಬದಲಾಗಿದೆ. ತೆಂಗಿನ ಮರದ ವರ್ಣನೆಗೆ ಜರ್ಮನ್ ಮೂಲವಿದ್ದರೂ ಅದು ಅಪ್ಪಟ ದಕ್ಷಿಣ ಕನ್ನಡದ್ದೇ. ''ಬಾಯಾರಿದ

ದಾರಿಗನಿಗೆ ಬಿಲ್ಲವ ಮರವನ್ನೇರಿ ಸೀಯಾಳವನ್ನು ಕೊಡನೆ!'' ಎಂದಿದ್ದಾರೆ.

ಅಲ್ಲಲ್ಲಿ ಕಲ್ಪಕತೆಯೂ ಮಿಂಚಿದೆ. ಹಸಿಯ ಮೇವು ಇಲ್ಲದಿದ್ದರೂ ಮುಳ್ಳನ್ನೇ ಹಸಿವೆಯಲ್ಲಿ ತಿನ್ನುವ, ಅಮಿತ ಸಹನದಿಂದ ಕೂಡಿದ ಒಂಟೆಯು ಉಸುಬಿನಲ್ಲಿಯ ನಾವೆಯಾಗಿದೆಯಂತೆ.

ಕಿಟೆಲ್ ಹೊಸಗನ್ನಡದ ಗಟ್ಟಿ ನೆಲೆಯ ಆದಿಮ ಕವಿ. ಅವರ ಕವನ ಪರಂಪರೆ ಅಲ್ಲಲ್ಲಿ ಮುಂದುವರಿಯಿತು. 1890ರ ದಶಕದಿಂದ, ಇದೇ ರೀತಿ ಎದ್ದು ಕಾಣುವ ಹೆಸರುಗಳು ಎಸ್.ಜಿ.ನರಸಿಂಹಾಚಾರ್ಯ, ಹಟ್ಟಿಯಂಗಡಿ ನಾರಾಯಣರಾವ್ ಮತ್ತು ಶಾಂತ ಕವಿಗಳು. ಬಿ.ಎಂ.ಶ್ರೀ ಅವರ 'ಇಂಗ್ಲಿಷ್ ಗೀತೆಗಳು' ಬಂದಾಗಿನಿಂದ ನವೋದಯ ಕಾವ್ಯದ ರಾಜಮಾರ್ಗ ಮುಕ್ತವಾಯಿತು.

● **ಡಾ. ಶ್ರೀನಿವಾಸ ಹಾವನೂರ**

---

## ನೀತಿಪರ

ದುಷ್ಟವ್ಯಾಘ್ರನ ಕೈಯ ಮುಟ್ಟಿ ಹಿಡಿತರಬಹುದು
ಅಟ್ಟಿ ಬಹ ಮದಕರಿಯ ಕಟ್ಟಬಹುದು
ಕೃಷ್ಣಸರ್ಪನ ಹುತ್ತ ಕಲಕಿ ಜೀವಿಸಬಹುದು
ದುಷ್ಪಾತ್ರರಾದವರ ಬಿಟ್ಟು, ಕಳೆ, ಮನವೇ.



ಸರಿಗಳೂರನು ಶೇರುವವೆ? ವಾ-
ಸರದ ಬೆಳಕಿಗೆ ಗೂಗೆಗಳು ಸಂ-
ಚರಿಸುವವೆ? ಬೆಳದಿಂಗಳಿಷ್ಟವೆ ಜಾರಚೋರರಿಗೆ?
ಸರಸಗೀತಾ ಪ್ರೌಢಿ ಗೊಲ್ಲರಿ-
ಗರಿಯಲಹುದೇ ದುರ್ವ್ಯಸನದಿಂದ್
ಉರಿವ ಪಾತಕಗೇತಕ್ಕೆ ಸನ್ಮಾರ್ಗದಭ್ಯಾಸ.



ಮರುಳು ಹಿಡಿದವ ವಿಷದ ಗುಣಿಕೆಯ-
ನರದು ಕುಡಿವಂದದಲಿ ಮೋಹಾವರಣದಲಿ
ಮರದಿರ್ದು ತನ್ನನು ಮೂಢಭವದಲಿ
ಪರಿಪರಿಯ ಸಂಸಾರಪಾಕದಿ
ಹಿರಿದು ಜಗಿವಡದಿರ್ದ ಮನುಜಗೆ
ದೊರಕುವದೆ ಪರಸೌಖ್ಯ ತೆರುಳಿಯ ಹುಳುವಿನಂತ್ ಇಹನು.

## ಕಾಡಿನಿಂದ ನಾಡಿಗೆ

ಮೊದಲು ಮನುಜರು ಸದನವಿಲ್ಲದೆ
ಹದವನರಿಯದೆ ಮೃಗಗಳಂತೆಯೆ
ಪೊದರ ಪೊಕ್ಕರು ಬಳಿಕೆ ಪರ್ಣದ ಶಾಲೆ ರಚಿಸಿದರು
ತದನು ಬುದ್ಧಿಯ ಕಲಿತು, ಚರ್ಮದ
ಹೊದಿಕೆಯಿಂದಲು ಬಟ್ಟೆಯಿಂದಲು
ಬಿದಿರು ಗಳುಗಳ ಮುಚ್ಚಿ, ಲಘುವಹ ಡೇರೆ ಹಾಕಿದರು.

ಹಲವು ಕಾಲದ ಮೇಲೆ ನೋಡ್ವೆ
ಹಲವು ತೋಟವ ಮಾಡಿ, ಜೋಕಿಲಿ
ಜಲವ ತಿರುಗಿಸಿ, ಬೇಲಿ ಸುತ್ತಿಸಿ ಬೆಳಸುವವರಾಗಿ
ಫಲವ ಕಂಡ್ ಆ ಸುಖದ ತಳದಲಿ
ನೆಲದ ಕಟ್ಟನು ಹಾಕಿ ಮನೆಗಳ
ಚೆಲುವಿನಿಂದಲಿ ಕಟ್ಟಿ ಪುರಜನರಾಗಿ ಒಪ್ಪಿದರು.

## ಹಿಂದೂ ದೇಶ

ತಂದೆತಾಯ್ಗಳನಗಲಿ ಪಶುಗಳು
ಮುಂದೆ ಮಂದೆಗಳಟ್ಟಿಕೊಳ್ಳುತ
ಬಂದರಾರ್ಯರಿರಾಣದಿಂದಲೆ ಸಿಂಧುನದಿ ದಡಕೆ
ಚಂದ ಹುಲ್ಲು ಸ್ಥಳವನಾರಿಸಿ
ತಂದ ಹಿಂಡುಗಳನ್ನು ಸಾಕುತ
ಹೊಂದುತ್ತಲಿದ್ದರು ಜಠರಪೋಷಣವಧಿಕ ಮುದರಿಂದ.

ತದನುವರ್ಧಿಸಿ ತಡೆಯದೆ, ತಮಗೆ
ಮೊದಲು ನೆಲ ಪಡೆದಿದ್ದ ಜನರನು
ಬೆದರಿಸೋಡಿಸಿ ವಿಂಧ್ಯ ಕಾಡಿಗೆ, ಭೂಪರೆನಿಸಿದರು
ಇದರನಂತರ ಹೆಚ್ಚು ವನ ಜನ-
ಪದಗಳ ಪೊಕ್ಕ್, ಐದಿ, ದಕ್ಷಿಣ-
ದದೆಸೆ ಸಾಧಿಸಿ ತಮ್ಮ ಕುಲವನು ಮಾನಪಡಿಸಿದರು.

# ದಾಸರ ಮಾರ್ಗ

❑ ಜಿ.ಪಿ. ರಾಜರತ್ನಂ

ದಾಸರೊಬ್ಬರು ಯಾರ ಮನೆಗೋ ಭಿಕ್ಷಕ್ಕೆ ಹೋದರಂತೆ. ಅವರ ಪದವನ್ನು ಕೇಳಿದ ಮನೆಯಾಕೆ, ಇಕ್ಕಲಾರದ ಕಾರ್ಪಣ್ಯದಿಂದ, ದಾಸರನ್ನು ಹಾಗೇ ಸಾಗಹಾಕಲು ಏನೇನೋ ಸಬೂಬು ಹೇಳಿದಳಂತೆ.

ಕೈ ಎಂಜಲು ಎಂದಳಂತೆ. ಚಿಕ್ಕಮಕ್ಕಳು ಅಳುತಾರೆ, ಬಿಟ್ಟು ಬರಲಾರೆ ಎಂದಳಂತೆ. ಮಡಕೆ ತೊಳೀತಾ ಇದೇನೆ, ಮನೇ ಸಾರಿಸುತಾ ಇದೇನೆ, ಭಿಕ್ಷೆ ಹಾಕೋಕೆ ಹುಡುಗರು ಯಾರೂ ಇಲ್ಲ, ತೊಡೆಯ ಮೇಲಿನ ಕೂಸು ಮೊಲೆಯ ಉಣ್ಣುತಲಿದೆ ಎಂದಳಂತೆ.

ಮಾತುಮಾತಿಗೂ 'ಹೋಗೋ ದಾಸಯ್ಯ, ಹೋಗೋ ದಾಸಯ್ಯ' ಅಂದರೂ ಆ ದಾಸರು ಹೋಗಲಿಲ್ಲವಂತೆ.

ಅಟ್ಟದ ಮೇಲಿನ ಅಕ್ಕಿ ತೆಗೆಯಬೇಕು, ಹತ್ತೋಣವೆಂದರೆ ಹೊಟ್ಟೆನೋಯುತಲಿದೆ ಎಂದಳಂತೆ. ಮುಟ್ಟಾಗಿ ಇದ್ದೇನೆ, ಮನೆಯೊಳಗೆ ಯಾರೂ ಇಲ್ಲ ಎಂದಳಂತೆ.

ಮಾತುಮಾತಿಗೂ 'ಹೋಗೋ ದಾಸಯ್ಯ, ಹೋಗೋ ದಾಸಯ್ಯ' ಅಂದರೂ ಆ ದಾಸರು ಹೋಗಲಿಲ್ಲವಂತೆ.

ವೀಸದ ಕಾಸಿಗೆ ದವಸವ ನಾ ತಂದೆ, ಕೂಸಿಗೆ ಸಾಲದು, ಹೋಗೋ ದಾಸಯ್ಯ ಅಂದಳಂತೆ. ಹುಡುಗಾಟ ಮಾಡದೆ ಹೋಗೋ ದಾಸಯ್ಯ, ನಿಷ್ಠೂರ ಮಾಡದೆ ಹೋಗೋ ದಾಸಯ್ಯ ಎಂದು ಆ ಮನೆಯಾಕೆ ಏನೇನು ಹೇಳಿದರೂ ದಾಸರು ಹೋಗಲಿಲ್ಲವಂತೆ.

ಕೊನೆಗೆ, 'ಆಸೆಕಾರ ನೀನು, ದೋಷಕಾರಿ ನಾನು' ಎಂದುಕೊಂಡು ಆಕೆ ದಾಸರಿಗೆ ಭಿಕ್ಷೆನೀಡಿದಳಂತೆ.

'ತಾಳಿದವನು ಬಾಳಿಯಾನು' ಎಂಬುದು ಸುಳ್ಳಲ್ಲ.

ನಮ್ಮ ಕನ್ನಡವಾದರೂ ಎಷ್ಟು 'ಇಕ್ಕಲಾರದ ಕೈ'ಗಳಿಂದ ಅನ್ನವನ್ನು ಈಸಿಕೊಂಡು ಬೆಳೆದಿದೆಯೋ!

ಈ ಶತಮಾನದ ಆದಿಯಲ್ಲಿ ಶ್ರೀ ಶಾಂತಕವಿಗಳು 'ಕನ್ನಡ ದಾಸಯ್ಯ'ನಾಗಿ ಮನೆ ಮನೆಗೂ ಹೋದರು. 'ಬೇಡಲು ಕನ್ನಡ ದಾಸಯ್ಯ ಬಂದಿಹ, ನೀಡಿರಮ್ಮಾ! ತಡಮಾಡದಲೇ' ಎಂದರು. 'ಕನ್ನಡ ದೇಶದೆ ದೊಡ್ಡವರಾದಿರಿ. ಕನ್ನಡ ವಿದ್ಯೆಯ ಗಳಿಸಿದಿರಿ. ಕನ್ನಡದಿಂದಲೆ ಸಿರಿವಂತರಾದಿರಿ. ಕನ್ನಡ ದೇಶದೆ ಹೆಸರಾದಿರಿ. ನೀಡಿರಮ್ಮಾ!' ಎಂದರು. 'ಹೊಟ್ಟೆಗಿಲ್ಲದೆ ಬಂದ ದಾಸಯ್ಯ ಇವನಲ್ಲ, ಕೊಟ್ಟುದ ಬಿಟ್ಟು ಹೋಗುವನಲ್ಲವು. ಕೊಟ್ಟರೆ ಹಿಗ್ಗುವ, ಕೊಡದಿರೆ ಕುಗ್ಗುವ, ಕೆಟ್ಟಮನದ ಗುರುತು ಇವಗಿಲ್ಲವು. ಕಾಸಿಗಲ್ಲವು, ನಿಮ್ಮ ಸೋಸಿಗೆ (ವಿಶ್ವಾಸಕ್ಕೆ) ಬೆಲೆಯಿದೆ. ನೀಡಿರಮ್ಮಾ!' ಎಂದರು.

ಶಾಂತಕವಿಗಳಂಥ ಕನ್ನಡ ದಾಸಯ್ಯಗಳಿಂದ ಎಷ್ಟೋ ಇಕ್ಕಲಾರದ ಕೈಗಳಿಗೆ ಔದಾರ್ಯ ಬಂತು.

ದಾಸರ ಮಾರ್ಗ ದೊಡ್ಡ ಮಾರ್ಗ.

●

1972 ರಲ್ಲಿ ಪ್ರಕಟವಾದ ರಾಜರತ್ನಂರವರ 'ವಿಚಾರ ರಶ್ಮಿ' ಎಂಬ ಪುಸ್ತಕದಿಂದ

# ಕತ್ತಲೆಯ ಕಾತರ...

❑ ವೈಗ. ಜಗದೀಶ್

ನಿಯಾನ್, ಮರ್ಕ್ಯುರಿ ದೀಪಗಳಿಂದ ಹಗಲಾದ ರಾತ್ರಿ; ಬೆಳಕಿನಲ್ಲಿ ಬಯಲಾದ ಕತ್ತಲುಕತ್ತಲ ಧ್ಯಾನದ ನೆನಪು ಕನಸೆಂಬತೆ ಭಾಸವಾಗುವ ಹೊತ್ತಿನಲ್ಲಿ ಕತ್ತಲೆಗೆ ಕಾತರಿಸುವುದು ನಗೆ ತರಿಸುವ ಮಾತಾದೀತು!

ಸದಾ ಬೆಳಕನ್ನು ಹಂಬಲಿಸುವ ಮಂದಿಗೆ ಕತ್ತಲಿನ ಆಪ್ತತೆ, ಆಪ್ಯಾಯಮಾನತೆ ಅರ್ಥವಾಗದು. ಕತ್ತಲೆಗಿರುವ ನಿಗೂಢತೆ ಗೊತ್ತಾಗಬೇಕಾದರೆ ಬೆಳಕೇ ಇಲ್ಲದ, ಚಿಮಣಿ ಬುಡ್ಡಿಯಲ್ಲಿಯೇ ಕಾರಿರುಳ ಕಳೆಯಬೇಕಾದ, ವಿದ್ಯುತ್ ತಂತಿಗಳನ್ನೇ ಕಾಣದ ಮಲೆನಾಡಿನ ಮಜಿರೆ ಹಳ್ಳಿಗಳಿಗೆ ತೆರಳಬೇಕು.

ಕತ್ತಲೆಯೆಂದರೆ ಮೌನ-ಬೆಳಕೆಂದರೆ ಮಾತು. ಮಾತು ಆಡಿದರೆ ಹೋಯಿತು. ಶಬ್ದಗಳು ಬೆತ್ತಲಾಗಿ ಭಾವನೆಗಳು ಬಯಲಿಗೆ ಬಂದು ಬಿಡುತ್ತವೆ. ಬೆಳಕು ಸಹ ಮಾತಿನ ಹಾಗೆ. ಎಲ್ಲವೂ ಧುತ್ತೆಂದು ಎದುರು ಬಂದು ನಿಲ್ಲುತ್ತವೆ. ಕತ್ತಲು ಹಾಗಲ್ಲ. ವಾಚಾಳಿತನ ಅದಕ್ಕಿಲ್ಲ. ಶಬ್ದದ ಹಲವು ಅರ್ಥಗಳನ್ನು ಧ್ವನಿಸುವ ಕವಿತೆಯ ಹಾಗೆ. ಬಡಬಾನಲವನ್ನು ಅವಿತಿಟ್ಟುಕೊಂಡ ಸಮುದ್ರದ ಗಂಭೀರತೆ.

ಕತ್ತಲೆ ಗರ್ಭಕೋಶದೊಳಗಿನ ಭ್ರೂಣ. ಬೆಳಕು ತಾಯ ಮಾಸದಿಂದ ಹೊರಜಿಗಿದ ಮಗು. ಈಗ ಕಾಲ ಬದಲಾಗಿದೆ. ಸ್ಕ್ಯಾನಿಂಗ್ ಬಂದಿದೆ. ಹೊಟ್ಟೆಯೊಳಗೆ ಬೆಳೆಯುತ್ತಿರುವ ಮಗು, ಅದರ ಲಿಂಗ, ವೈಕಲ್ಯ ತಿಳಿಯಬೇಕಾದರೆ ಮೊದಲು ಒಂಭತ್ತು ತಿಂಗಳು ಕಾಯಬೇಕಿತ್ತು. ಈಗ ಕಾತರವೇ ಇಲ್ಲದ ಸ್ಥಿತಿ. ಕತ್ತಲೆಗಿರುವ ಮಹತ್ವವೂ ಅನೇಕ ಸಾರಿ ಬೆಳಕಿಗೆ ಇರುವುದಿಲ್ಲ.

ಕತ್ತಲೆಯ ದಿವ್ಯತೆ ಬೆಳಕಿಗೆ ಬರುವುದಿಲ್ಲ. ಎಲ್ಲವನ್ನೂ ತನ್ನ ಶಿಖೆ, ಗಡ್ಡದಲ್ಲಿ ಕಟ್ಟಿಕೊಂಡು ಸಾಗುವ ಋಷಿಯ ಶಕ್ತಿ ಕತ್ತಲೆಗಿದ್ದರೆ, ನುಣುಪಾಗಿ ಗಡ್ಡ ಕೆರೆದು ಬೋಳುಬೋಳಾಗಿ ಬದುಕುವ ಗೃಹಸ್ಥನಂತೆ ಬೆಳಕು. ಬೆಳಕಿನ ಮಹತ್ವ ಗೊತ್ತಾಗಬೇಕಾದರೆ ಕತ್ತಲು ಇರಲೇಬೇಕು. ವರ್ಷಪೂರ್ತಿ ರಾತ್ರಿಯಾಗದೇ ಹಗಲೇ ಇತ್ತೆಂದರೆ ಆಗಿನ ಕಥೆ ಯಾರಿಗೆ ಬೇಕು ಹೇಳಿ. ನಿಯಾನ್ ದೀಪಗಳ ಬೆಳಕಲ್ಲಿ, ಆಗಾಗ್ಗೆ ಭಾರೀ ಲೈಟು ಬಿಟ್ಟುಕೊಂಡು ಸಾಗುವ ವಾಹನಗಳ ಬೆಳಕಲ್ಲಿ ನಗರದ ಮಂದಿಗೆ ಕತ್ತಲಿನ ಗಾಢತೆಯ ಅನುಭವ ಆಗುವುದೇ ಇಲ್ಲ. ಆಕಾಶ ಕಾಣದಷ್ಟು ಬೆಳಕು ಆವರಿಸಿರುತ್ತದೆ. ಆಗಸದಲ್ಲಿನ ಚಿತ್ತಾರ, ಮಿನುಗುತಾರೆಗಳ ವಿಹಂಗಮ ನೋಟ, ತಾರೆಯ ಬೆಳಕನ್ನು ಗವ್ವನೆ ಕವಿದು ಬಿಡುವ ಕಾರ್ಮೋಡ, ಓಡುವ ಚಂದ್ರನನ್ನು ಈಗಿನ ಮಕ್ಕಳು ಕಾಣಲಾರರು. 'ಚಂದಿರನೇತಕೆ ಓಡುವನಮ್ಮ' ಎಂಬ ಹಾಡು ಹೇಳಿದರೆ ಅವರಪ್ಪನಿಗೆ ಸಿಗರೇಟು ತರಲು ಎಂಬ ಉತ್ತರ ಮಕ್ಕಳಿಂದ ಬರುವಷ್ಟು ನಮಗೆ ಗಗನ ದೂರವಾಗಿದೆ. ಟಿ.ವಿ.ಯ ಕಡೆ ಕಣ್ಣು ಹೊರಳಿಸಿ ಅಥವಾ ಪುಸ್ತಕದೊಳಗೆ ತಲೆ ಹುದುಗಿಸಿದ ಮಕ್ಕಳು ಊರ್ಧ್ವಮುಖಿಗಳಾಗಲು ಸಾಧ್ಯವೆ?

ಚಂದ್ರನ ಮಡದಿ ರೋಹಿಣಿ, ದೂರದಲ್ಲಿ ಫಳಫಳನೆ ಹೊಳೆವ ಶುಕ್ರ, ಸಪ್ತರ್ಷಿಮಂಡಲ, ಕೂರಿಗೆ ಸಾಲಿನ

ಚಿತ್ರ, ಮೇಷ, ವೃಷಭ, ಮಿಥುನದಂತಹ ರಾಶಿಗಳ ಚಿತ್ರ ಹೋಲುವ ನಕ್ಷತ್ರಪುಂಜ ಯಾವುವು ಗೊತ್ತೇ ಇಲ್ಲ. ಬೆಂಗಳೂರಿನ ಜವಾಹರಲಾಲ್‌ನೆಹರೂ ತಾರಾಲಯವೆಂಬ ಪ್ರದರ್ಶನ ಕೇಂದ್ರದಲ್ಲಿ ಮಾತ್ರ ಈಗ ಆಕಾಶ ಸಿಕ್ಕೀತು. ಆಕಾಶವೆಂಬ ತಂದೆಯನ್ನು ಕಳೆದುಕೊಂಡ ಭೂರಮೆಯ ಮಕ್ಕಳು ನಾವು. ಭೂಮಿ ಹಾಸಿಗೆಗೆ ಆಕಾಶದ ಚಾದರವಿಲ್ಲ. ಇಲ್ಲಿ ಬರೀ ಬೆಳಕಿನ ಚಾದರ. ಕಾರ್ಖಾನೆಯ ಕೆಂಪು-ಹಳದಿ ಹೊಗೆ ಲಕಲಕನೆ ಮಿನುಗುವ ನಕ್ಷತ್ರಗಳನ್ನು ಮಂಕಾಗಿಸುತ್ತದೆ.

ಕತ್ತಲ ಧ್ಯಾನದ ಸುಖ ಅನುಭವಿಸಿದವರಿಗೆ ಗೊತ್ತು. ತಂಗಾಳಿಯು ಮೈಸವರಿ ರೋಮಾಂಚನ ಹುಟ್ಟಿಸುವ ಹೊತ್ತಿನಲ್ಲಿ ಹಕ್ಕಿಪಿಕ್ಕಿಗಳ ಕಲರವ, ಎಲೆಮರೆಯಿಂದ ಸುಯ್ಯನೆ ಹೊಮ್ಮುವ ಗಾಳಿ ಹುಟ್ಟಿಸುವ ನಾದ ಕೇಳುತ್ತಾ, ಲಕ್ಷ ನಕ್ಷತ್ರ ನಿಹಾರಿಕೆಗಳ ಲೋಕದತ್ತ ಕಣ್ಣಾಯಿಸಿ ತದೇಕ ಚಿತ್ತದಿಂದ ಕೂತು ಸಂಭ್ರಮಿಸುವ ಸುಖಕ್ಕೆ ಎಲ್ಲೆಯೇ ಇಲ್ಲ.

ತೊಪ, ತೊಪ ಎಂದು ಛತ್ರಿಯ ಮೇಲೆ ಬೀಳುವ ಮಳೆಯಲ್ಲಿ ನಿಗೂಢ ರಾತ್ರಿಯಲ್ಲಿ ಏಕಾಂಗಿಯಾಗಿ ಛತ್ರಿ ಹಿಡಿದು ನಡೆಯುವುದಿದೆಯಲ್ಲ ಅದು ಅಗಮ್ಯದತ್ತ ಪಯಣದಂತೆ. ಕೋಟಿ ಕೊಟ್ಟರೂ ಸಿಗದ ಮಳೆನಡಿಗೆ ಮಳೆಕಡಿಮೆಯಾದ ಈ ದಿನಗಳಲ್ಲಿ ಎಲ್ಲಿ ಸಿಗಬೇಕು?

ಕತ್ತಲೆಯನ್ನು ಅಜ್ಞಾನಕ್ಕೂ, ಕೇಡಿತನಕ್ಕೂ, ಕೆಡುಕುತನಕ್ಕೂ ಹೋಲಿಸಿದವರೇ ಹೆಚ್ಚು.

ಕತ್ತಲ ಕಾತರದ ಸಂಭ್ರಮ ಸದಾ ಬೆಳಕಿನಲ್ಲಿರುವರಿಗೆ ಮಾತ್ರ ಗೊತ್ತು. ವಿಪರ್ಯಾಸವೆಂದರೆ ಕತ್ತಲೆಯ ಅನುಭವಕ್ಕೂ ಸಹ ಬೆಳಕು ಬೇಕೇ ಬೇಕು. ಒಂದರ್ಥದಲ್ಲಿ ಕತ್ತಲು ಸಂಭ್ರಮ-ಬೆಳಕು ಭ್ರಮೆ.

---

**ವೈ. ಗ ಜಗದೀಶ್, ಹಳೆ ಶಾರದಾದೇವಿ ಪ್ರೌಢಶಾಲೆ, ಹಿಂಭಾಗ, ಕೆ. ಆರ್. ಪುರಂ. ಶಿವಮೊಗ್ಗ.**

---

# ಹಂಗಾಮ

## ಕಥೆ ಮತ್ತು ಕಾವ್ಯ ಸ್ಪರ್ಧೆ

ಇವು ರಾಜ್ಯಮಟ್ಟದ ಸ್ಪರ್ಧೆಗಳಾಗಿದ್ದು, ತಲಾ ಮೂರು ಬಹುಮಾನಗಳನ್ನು ನೀಡಲಾಗುವುದು.

**'ಹಂಗಾಮ ಕಥಾ ಸ್ಪರ್ಧೆ'** ಮತ್ತು **'ಹಂಗಾಮ ಕಾವ್ಯ ಸ್ಪರ್ಧೆ'**ಗಾಗಿ ಆಸಕ್ತರು ಈ ಮೊದಲು ಎಲ್ಲೂ ಪ್ರಕಟವಾಗಿರದ ತಮ್ಮ ಸ್ವಂತ ರಚನೆಯನ್ನು ಕಳುಹಿಸಬೇಕು. ಸ್ಪರ್ಧೆಗೆ ಕಳಿಸಿದ ಕಥೆ ಅಥವಾ ಕವಿತೆಯನ್ನು ಯಾವುದೇ ಕಾರಣಕ್ಕೂ ಹಿಂತಿರುಗಿಸಲಾಗುವುದಿಲ್ಲ. ಬರಹ ಕಳಿಸುವ ಕವರಿನ ಮೇಲೆ '**ಹಂಗಾಮ ಕಥೆ/ಕಾವ್ಯ ಸ್ಪರ್ಧೆಗೆ**' ಎಂದು ನಮೂದಿಸಬೇಕು.

ಸ್ಪರ್ಧೆಗೆ ಕಥೆ ಅಥವಾ ಕವಿತೆ ಕಳಿಸಲು ಕೊನೆಯ ದಿನಾಂಕ ಜನವರಿ 10, 2005. ಕಳುಹಿಸಬೇಕಾದ ವಿಳಾಸ:

ಸಂಪಾದಕ, '**ಹಂಗಾಮ**', ಅವಧಿ ಪ್ರಕಾಶನ, ನಂ.15, ನಾಗೇಶ್ ಬಿಲ್ಡಿಂಗ್, ಮಾರಿಯಮ್ಮ ದೇವಸ್ಥಾನದ ಹತ್ತಿರ, ಕದಿರೇನಹಳ್ಳಿ, ಬನಶಂಕರಿ 2ನೇ ಹಂತ, ಬೆಂಗಳೂರು - 560 070.

**-ಸಂ**

# ಸ್ತ್ರೀವಾದಿ ಹೋರಾಟ ಪುರುಷ ವಿರೋಧಿಯಲ್ಲ



ಮೂರು ದಶಕಗಳಿಂದ ಕವನ ಬರೆಯುತ್ತಿರುವ ಮಾಲತಿ ಪಟ್ಟಣಶೆಟ್ಟಿ ನಿವೃತ್ತ ಇಂಗ್ಲಿಷ್ ಪ್ರಾಧ್ಯಾಪಕಿ. ಕಥೆ ವಿಮರ್ಶೆ ಬರೆದಿದ್ದರೂ ಕವನದ ಕಡೆಗೇ ಅವರಿಗೆ ಹೆಚ್ಚು ಒಲವು. 'ಬಾ ಪರೀಕ್ಷೆಗೆ' , 'ಗರಿಗೆದರಿ' 'ತಂದೆ ಬದುಕು ಗುಲಾಬಿ', 'ದಾಹತೀರ', 'ಮೌನ ಕರಗುವ ಹೊತ್ತು' ಇವು ಇವರ ಕವನ ಸಂಕಲನಗಳು. 'ಇಂದು ನಿನ್ನಿನ ಕಥೆಗಳು', 'ಸೂರ್ಯ ಮುಳುಗುವುದಿಲ್ಲ' ಕಥಾಸಂಕಲನಗಳಾದರೆ, 'ಬಸವರಾಜ ಕಟ್ಟೀಮನಿ : ಬದುಕು-ಬರಹ' , 'ಸಂದರ್ಭ' 'ಸಂವೇದನೆ' - ವಿಮರ್ಶಾ ಕೃತಿಗಳು. ರಾಜ್ಯ ಸಾಹಿತ್ಯ ಅಕಾಡೆಮಿ ಗೌರವ ಪ್ರಶಸ್ತಿ ಪಡೆದಿದ್ದಾರೆ. ಮಾಲತಿಯವರು ಯುವಕವಿ ವಿಜಯಕಾಂತ ಪಾಟೀಲ್ ಜೊತೆಗೆ ಮಾತನಾಡಿದ್ದರಲ್ಲಿ ಕೆಲವು ಭಾಗವನ್ನು ಇಲ್ಲಿ ಕೊಡಲಾಗಿದೆ.

❑ ಮಾಲತಿ ಪಟ್ಟಣಶೆಟ್ಟಿ

ನೋವು-ವೇದನೆ, ತೊಳಲಾಟಗಳಿಲ್ಲದ ಸಾಹಿತ್ಯವು ಜಗತ್ತಿನಲ್ಲಿ ಎಲ್ಲಾದರೂ ಇದೆಯೇ? ವೇದನೆಯಲ್ಲಿಯ ಆಪ್ತತೆ, ಪ್ರಾಮಾಣಿಕತೆ ಇನ್ನ್ಯಾವ ಭಾವದಲ್ಲಿದೆ? ಸಾಹಿತ್ಯದ ಪರಿಪಾಕಕ್ಕೆ ವೇದನೆಯೇ ಅಗ್ನಿ ಇದ್ದಂತೆ. ಮಹಿಳಾ ಸಾಹಿತ್ಯದಲ್ಲಿ ನೋವು, ವೇದನೆ, ತೊಳಲಾಟ ಹೆಚ್ಚು ಹೆಚ್ಚಾಗಿ ಇರಲಿಕ್ಕೆ ಕಾರಣ ಅವಳ ಬದುಕಿನಲ್ಲಿ ಇನ್ನೂ ತನಕ ಶೋಷಣೆಯಿಂದ ಬಿಡುಗಡೆ ಇಲ್ಲದ್ದು. ಈಗ ಹೊಸ ಹೊಸ ಪ್ರಕಾರದ ಶೋಷಣೆಗಳು ಇದಿರಾಗಿ ಆಕೆಯನ್ನು ಘಾಸಿಗೊಳಿಸುತ್ತಿವೆ. ಶೋಷಣೆ ಕಡಿಮೆಯಾದರೆ ತಾನೇ ಅವಳು ಬದುಕಿನ ಬೇರೆ ಸ್ತರಗಳನ್ನು ಗಮನಿಸಲು ಸಾಧ್ಯವಾಗುವುದು?

ನಾವು ಏನೇ ಹೇಳಿದರೂ ಕಾವ್ಯ ತನ್ನ ಹಾದಿಯಲ್ಲಿ ಸಾಗುತ್ತಲೇ ಇದೆ. ಪರಿವರ್ತನೆಯ ಅಲೆಗಳು ಬಂದಷ್ಟೂ ಅದರಲ್ಲಿ ಜೀವಂತಿಕೆ ಹೆಚ್ಚುತ್ತದಲ್ಲವೇ? ನವ್ಯ-ನವ್ಯೋತ್ತರ-ನವೋದಯಗಳ ಕೆಲ ಪ್ರಮಾಣದ ಮಿಶ್ರಣದೊಂದಿಗೆ ಮತ್ತು ಹೊಸ ಪ್ರಯೋಗಗಳೊಂದಿಗೆ ಇಂದಿನ ಕಾವ್ಯ ಮುನ್ನಡೆದಿದೆ. ಅದಕ್ಕಿನ್ನೂ ಖಿತ ರೂಪ ಬಂದಿಲ್ಲ. ಗೇಯತೆ ಮರುಕಳಿಸಿದೆ. ನವೋದಯದಲ್ಲಿದ್ದಂತೆ ಚೌಪದಿ, ಷಷ್ಪದಿ, ಸುನೀತಗಳಲ್ಲಿಯೂ ಕಾವ್ಯಾಭಿವ್ಯಕ್ತಿ ಹೆಚ್ಚು ಹೆಚ್ಚಾಗಿ ಗೋಚರಿಸುತ್ತಿದೆ. ಒಟ್ಟಾರೆ ಹೊಸ ಪ್ರಯೋಗಶೀಲತೆಯೊಂದಿಗೆ ಹೊಸ ದಾರಿಯನ್ನು ತುಳಿಯುತ್ತಿದೆ ನಮ್ಮ ಇಂದಿನ ಕನ್ನಡ ಕಾವ್ಯ.

ಸ್ತ್ರೀವಾದಿ ಹೋರಾಟವು ಪುರುಷ ವಿರೋಧಿ ಅಲ್ಲ. ಅದು ಶೋಷಕ ಶಕ್ತಿಗಳೊಂದಿಗಿನದು. ಶೋಷಕ ವ್ಯವಸ್ಥೆಯೊಂದಿಗಿನದು. ಆದರೆ ಆ ಶೋಷಣೆಯಲ್ಲಿ ಪುರುಷನ ಪಾತ್ರ ಇರುವುದರಿಂದ ಸ್ತ್ರೀಯನ್ನು ನೋಡುವ ''ಅವನ ದೃಷ್ಟಿಯಲ್ಲಿ'' ಪರಿವರ್ತನೆಯನ್ನು ಈ ಚಳುವಳಿ ಬೇಡುತ್ತದೆ. ಸ್ತ್ರೀಯರನ್ನು ಸ್ತ್ರೀಯರೇ ಶೋಷಿಸುತ್ತಾರೆ; ವ್ಯವಸ್ಥೆಯೂ ಶೋಷಿಸುತ್ತಿದೆ. ಸಾಂಪ್ರದಾಯಿಕ ಕೌಟುಂಬಿಕ ನೈತಿಕತೆಯೂ ಅವಳನ್ನು ಶೋಷಿಸುತ್ತಿದೆ. ಸ್ತ್ರೀ ಪುರುಷದ್ವೇಷಿ ಅಲ್ಲ. ಪುರುಷನಂತೆ ಆಕೆಯೂ ಒಬ್ಬ ಸ್ವತಂತ್ರಜೀವಿ ಎಂದೇಕೆ ಪುರುಷವರ್ಗ ಭಾವಿಸುತ್ತಿಲ್ಲ ಎಂಬ ನೋವು ಈಗ ಪ್ರತಿಭಟನೆಯ ಸ್ವರೂಪವನ್ನು ತಳೆದರೆ ತಪ್ಪೇನು?

❑ ಟಿ. ಎಂ. ಉಷಾರಾಣಿ

# ಒಂದು ದಿನಚರಿ

ಕಣ್ಣು ತೆರೆಯಲೇ ಭಯ
ಹೆದರಿ ಮಂಜುಗತ್ತಲೆಗಲ್ಲ
ಬೆಳಕಿಗೆ ಕೊಡಬೇಕಾದ
ಉತ್ತರದಿಂದ

ನೆತ್ತಿ ಸೆರಗು ಜಾರದಂತೆ
ಮನೆ ಹೊಸ್ತಿಲಿನೊಂದಿಗೆ
ಹೃದಯಕ್ಕೂ ಮೊಳೆ
ಬಡಿಸಿಕೊಂಡ ದಿನದಿಂದ
ಗಂಡನ ಹೆಸರ್ಹೇಳಿ
ತನ್ನನ್ನೇ ಮರೆತ ಮರೆವು

ಕುಳಿಬಿದ್ದ ಕಣ್ಣಿಗೆ
ಮರೀಚಿಕೆಯಾದ ಕನಸುಗಳು
ಬೆಳದಿಂಗಳ ಬಯಕೆಗಳ
ಸುಟ್ಟ ಕಾಮಕೇಳಿಯ ರಾತ್ರಿಗಳು
ಸಾಂತ್ವನ ಹೇಳಲರಿಯದ ಮೂಲೆಗೆ
ಅರ್ಥವಾಗದ ನಿವೇದನೆ
ಚುಕ್ಕಿಗಳ ನೋಡಿ ನೋಟ
ಮರೆತಾಳೆಂದರೂ
ಮುಗಿಲ ಮರೆ ಮಾಟದ ಮಾಳಿಗೆ



ಯಾತನೆಯ ಮೌನದ ಪುಟಕ್ಕೆ
ಸ್ವಚ್ಛಂದ ಬಯಸಿ ಗೆಳತಿ
ಬರೆದಿಟ್ಟ ದಿನಚರಿ

ಧರಿಸಿದ್ದೆಲ್ಲವ ಕಳಚಿ
ಹಂಡೆ ಕಟ್ಟೆಗಿಟ್ಟು
ಬೆನ್ನ ಮೇಲೆ ನಿರಾಳ
ಹೆರಳರಾಶಿ ಚೆಲ್ಲಿ
ಹಾಯೆನಿಸುವ
ಬಿಸಿ ನೀರಿನ ಆವಿಯೊಂದಿಗೆ
ತನ್ನ ಬಿಡುಗಡೆ
ಇಡೀ ಜಗತ್ತು
ಬಚ್ಚಲು ಮನೆಯಾದಂದು!

# ಒಂದು ಹನಿ ಒಂದು ಬೀಜ

ಕರಗಿದ ಕರಿ ಮೋಡದಿಂದ
ಸುರಿದ ಬಿಳಿ ಮುತ್ತ
ಹನಿಯೊಳಗೆ
ತೀರ ತಾಕದ
ಅನಂತ ಕಡಲ ಸೃಷ್ಟಿ

ಮಣ್ಣಿಗೆ ಬಿದ್ದ ಬೀಜ
ಮೊಳೆತು ಟಿಸಿಲೊಡೆದು
ತೂಗಿ ಬಾಗುವ ತೆನೆ
ತುಂಬ ಕಾಳು
ಕಣದಿ ರಾಶಿಗೆ ರಾಶಿ

ಸಿಗದ ಬೆಳಕಿಗೆ
ಮೈತಾಗಿ ತೂಸಿ
ಗಾಳಿ
ಕಣ್ಣು ಕೈಕಾಲುಗಳ ಮಿಸುಕಾಟ
ಹೃದಯ ಬಡಿತದ ಸದ್ದು

ಒಂದು ಹನಿ
ಒಂದು ಬೀಜ
ಸಕಲ ಜೀವ ಸೃಷ್ಟಿಯ
ವಿಸ್ಮಯ ಜಗತ್ತು.

# ಪಯಣ

ಕಣ್ಣಾಚೆಗೆ
ನಿಲುಕುವ ಎತ್ತರಕ್ಕೆ
ಹತ್ತಿ ಮತ್ತೆ
ಪಾತಾಳಕ್ಕೆ ಬಿದ್ದು
ಬೆನ್ನಲ್ಲಿ ಎದೆಯಲ್ಲಿ
ಮಾಸದ ನೂರು ಗಾಯಗಳು
ಹತ್ತದ ಹೊರತು
ಕಂದಕಗಳ
ಅರಿವಾಗುತ್ತಿಲ್ಲ
ಹತ್ತಲಾಗುತ್ತಿಲ್ಲ
ಇಳಿಯದ ಹೊರತು
ಸೋತು ಕಾಲು
ಹುಣ್ಣಾದರೂ
ಪಕ್ವವಾಗುತಿದೆ ಕಾಲ
ಮುಟ್ಟದೇ ಮರಳುವ ಪ್ರಶ್ನೆಯಿಲ್ಲ



ಟಿ. ಎಂ. ಉಷಾರಾಣಿ
ಸಾಹಿತ್ಯಾಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ
ಹಂಪಿ-583276.
ವಿದ್ಯಾರಣ್ಯ.

# 'ಚಿರಂಜೀವಿ' ಶ್ರೀನಿವಾಸರಾಜು

❑ ರಘುನಾಥ ಚ.ಹ.



ಆಗಸ್ಟ್ 15 ಹಾಗೂ ನವಂಬರ್ 1 ಎಂದಾಕ್ಷಣ ಸ್ವಾತಂತ್ರ್ಯ ದಿನಾಚರಣೆ ಹಾಗೂ ಕನ್ನಡ ರಾಜ್ಯೋತ್ಸವ ಕಣ್ಣಲ್ಲಿ ಚಿತ್ರಗಳಾಗುತ್ತವೆ. ಶಾಲೆಯ ದಿನಗಳಲ್ಲಿ ಭಾಷಣ ಕೇಳಿ, ಕಾಗದದ ಧ್ವಜ ಹಿಡಿದು ಊರ ತುಂಬ ಮೆರವಣಿಗೆಯಲ್ಲಿ ಹೋಗಿ, 'ವಂದೇ ಮಾತರಂ', 'ಸಿರಿಗನ್ನಡಂ ಗೆಲ್ಗೆ' ಘೋಷಣೆಗಳನ್ನು ಕಿವಿತುಂಬಿ ಕೊಳ್ಳುತ್ತಿದ್ದವು. ಪೆಪ್ಪರಮಿಂಟು ಚಪ್ಪರಿಸಿ ಬಾಯಿ ಸಿಹಿ ಮಾಡಿಕೊಳ್ಳುತ್ತಿದ್ದೆವು. ಎಸ್ಸೆಸ್ಸೆಲ್ಸಿ ಮುಟ್ಟುವ ವೇಳೆಗಾಗಲೇ ರಂಗು ಕಳಕೊಳ್ಳಲಾರಂಭಿಸಿದ್ದ ಈ ಆಗಸ್ಟ್-ನವಂಬರ್ ಉತ್ಸವಗಳು ನಂತರದ ದಿನಗಳಲ್ಲಿ ನೆನಪುಗಳಾಗಿ ಮಾತ್ರ ಉಳಿದು, ಈಗ ಕ್ಯಾಲೆಂಡರ್‌ನಲ್ಲಿ ಕೆಂಪು ಚೆಲ್ಲುತ್ತ ನಿಂತಿವೆ. ಇಂಥದ್ದೇ ಇನ್ನೊಂದು ದಿನ ಜನವರಿ 31. ಈ ದಿನದೊಂದಿಗೆ ತಟಕ್ಕನೆ ನೆನಪಾಗುವುದು ಬೇಂದ್ರೆ, ಕ್ರೈಸ್ಟ್ ಕಾಲೇಜು ಹಾಗೂ ಚಿ.ಶ್ರೀನಿವಾಸರಾಜು.

ಒಂದನೇ ತರಗತಿಯ 'ಕನ್ನಡ ಭಾರತಿ'ಯಿಂದಲೇ ಜೊತೆಯಾದವರು ಬೇಂದ್ರೆಯಜ್ಜ. ಪದ್ಯದ ಕೊನೆಯಲ್ಲಿ ಕೊಟ್ಟಿರುವ ಕವಿಕೃತಿ ಮಾಹಿತಿಯ ಮೂಲಕ ಬೇಂದ್ರೆಯಜ್ಜನ ಬಗ್ಗೆ ಒಂಚೂರು ಮಾಹಿತಿಯನ್ನು ಗಟ್ಟಿಮಾಡಿದ್ದೂ ಉಂಟು. ಕವಿತೆಗಳ ಮೂಲಕ ಬೇಂದ್ರೆ ಹತ್ತಿರವಾಗಿದ್ದೇನೋ ನಿಜ. ಆದರೆ ಚರಿತ್ರೆಯ ಇಸವಿಗಳನ್ನು ಕಂಡು ಭಯಬೀಳುವ ಮನಸ್ಸಿಗೆ ಬೇಂದ್ರೆ ಜನ್ಮದಿನ ನೆನಪಿರುವುದಾದರೂ ಹೇಗೆ? ಜನವರಿ 31 ರಂದು ಬೇಂದ್ರೆ ಹುಟ್ಟುಹಬ್ಬ ಎನ್ನುವ ವಿಷಯವನ್ನು ಮನಸ್ಸಿನಲ್ಲಿ ಅಚ್ಚುಹಾಕಿದ್ದು ಬೆಂಗಳೂರಿನ ಕ್ರೈಸ್ಟ್ ಕಾಲೇಜು ಕನ್ನಡ ಸಂಘ ಹಾಗೂ ಕನ್ನಡ ಸಂಘದ ಚಿ.ಶ್ರೀನಿವಾಸರಾಜು. ಕನ್ನಡ ಸಂಘದ ಬೇಂದ್ರೆ ಸ್ಮೃತಿ ಕಾವ್ಯ ಸ್ಪರ್ಧೆಯ ಬಹುಮಾನ ವಿತರಣೆ ಸಮಾರಂಭ ನಡೆಯುವುದು ಪ್ರತಿವರ್ಷದ ಜನವರಿ 31ರಂದು. ಆ ದಿನವನ್ನು ಕನ್ನಡ ಸಂಘ 'ಕವಿ ದಿನ'ವನ್ನಾಗಿ ಆಚರಿಸುತ್ತದೆ. ಕನ್ನಡ ಸಂಘದ ಬೇಂದ್ರೆ ಸ್ಮೃತಿ ಕಾವ್ಯ ಸ್ಪರ್ಧೆಗೆ ಕವಿತೆ ಕಳುಹಿಸಿಕೊಟ್ಟು, ಜನವರಿ 31ಕ್ಕಾಗಿ ಕಾಯುವುದು ಕಾಲೇಜು ದಿನಗಳ ಪ್ರತಿವರ್ಷದ ರೂಢಿಯಾಗಿತ್ತು. ಕ್ರೈಸ್ಟ್ ಕಾಲೇಜಿನ ಕನ್ನಡ ಬಳಗದೊಂದಿಗೆ ಕಳೆದ ನೆನಪುಗಳು, ಆ ಸಂದರ್ಭದಲ್ಲಿ ಸಾಧ್ಯವಾಗುತ್ತಿದ್ದ ರಾಜ್ಯದ ನಾನಾ ಊರುಗಳ

ಯುವಬರಹಗಾರರ ನಂಟು, ಬಹುಮಾನ ರೂಪದಲ್ಲಿದೊರೆಯುತ್ತಿದ್ದ ಪುಸ್ತಕಗಳ ಪುಟ್ಟಗಂಟು- ಇವೆಲ್ಲವೂ ಜನವರಿ 31ರೊಂದಿಗೆ ಥಳುಕು ಹಾಕಿಕೊಂಡಿವೆ. ಬೇಂದ್ರೆ ಮನಸ್ಸಿಗೆ ಹೆಚ್ಚು ಹತ್ತಿರವಾದದ್ದು ಅವರ ಜನ್ಮದಿನ ನೆನಪಿನಲ್ಲುಳಿದದ್ದು ಹೀಗೆ. ಹಾಗಾಗಿಯೇ ಜ.31 ಎಂದಾಕ್ಷಣ ಬೇಂದ್ರೆ-ಕೈಸ್ಟ್ ಕಾಲೇಜು- ಶ್ರೀನಿವಾಸರಾಜು ನೆನಪಾಗುತ್ತಾರೆ. ಈಗ ಜ.31 ಮೊದಲಿನಂತೆ ಉತ್ಸಾಹವುಕ್ಕಿಸುವುದಿಲ್ಲ. ಏಕೆಂದರೆ, ಕೈಸ್ಟ್ ಕಾಲೇಜಿನಲ್ಲಿ ಶ್ರೀನಿವಾಸರಾಜು ಅವರಿಲ್ಲ; ಜ.31ರ ಕಾರ್ಯಕ್ರಮಗಳೂ ಮುಂಚಿನ ಬಿಸುಪು ಉಳಿಸಿ ಕೊಂಡಿಲ್ಲ. ಕೈಸ್ಟ್ ಕಾಲೇಜಿನ ಮುಂದೆ ಹಾದುಹೋಗುವಾಗಲೆಲ್ಲ ಶ್ರೀನಿವಾಸರಾಜು ನೆನಪಾಗುತ್ತಾರೆ. ಆ ದಿನಗಳಲ್ಲಿ ಕೈಸ್ಟ್ ಕಾಲೇಜಿನೊಂದಿಗೆ ನಂಟು ಹೇಗೆ ಬೆಳೆದಿತ್ತೆಂದರೆ, ವರ್ಷಕ್ಕೊಂದಾವರ್ತಿ ಬಂದುಹೋದರೂ ಆ ಕಾಲೇಜು ನಮ್ಮದೇ ಅನ್ನಿಸಿಬಿಡುತ್ತಿತ್ತು.

ಕೈಸ್ಟ್ ಕಾಲೇಜು ಕವನಸ್ಪರ್ಧೆಯ ಬಹುಪಾಲು ಬಹುಮಾನಿತರು ಶ್ರೀನಿವಾಸರಾಜು ಅವರನ್ನು ಗುರ್ತಿಸುವುದು 'ರಾಜು ಮೇಷ್ಟು' ಎಂದೇ. ಈ ರಾಜುಮೇಷ್ಟ ಶಿಷ್ಯ ಬಳಗ ದೊಡ್ಡದು. ಈ ಬಳಗದಲ್ಲಿ ಪಾಠ ಕೇಳಿದ ಶಿಷ್ಯರಿಗಿಂತ ಪಾಠ ಕೇಳದ ಶಿಷ್ಯರೇ ಹೆಚ್ಚಿರುವುದು ವಿಶೇಷ. ರಾಜುಮೇಷ್ಟ ಪರಿಚಯ ಸ್ಪರ್ಧೆಯ ಮೂಲಕ ಆದದ್ದಾದರೂ ನಂತರದ ಸಂಬಂಧ ಸಂಪರ್ಕಕ್ಕೆ ಅವರಲ್ಲಿನ ಒಳ್ಳೆಯತನವೇ ಕಾರಣ. ನಾನು ಬಲ್ಲಂತೆ ಸ್ಪರ್ಧೆಯ ನಂತರವೂ ಅನೇಕ ಯುವ ಬರಹಗಾರರು ರಾಜುಮೇಷ್ಟ್ರೊಂದಿಗೆ ಸಂಪರ್ಕ ಉಳಿಸಿಕೊಂಡು ಬಂದಿದ್ದಾರೆ. ಈ ಸಂಪರ್ಕ ಅಪ್ಪಟ ಗುರುಶಿಷ್ಯ ವಾತ್ಸಲ್ಯದ್ದು.

ಶ್ರೀನಿವಾಸರಾಜು ಅವರು ಕೈಸ್ಟ್ ಕಾಲೇಜು ಸೇರಿದ್ದು 1969ರಲ್ಲಿ. 1972ಲ್ಲಿ ಕನ್ನಡ ಸಂಘ ಆರಂಭಿಸಿದರು. ಈ ಕನ್ನಡ ಸಂಘದ ಮೂಲಕ ರಾಜುಮೇಷ್ಟು ಮಾಡಿದ ಕೆಲಸ ಎರಡು ರೀತಿಯದು: ಒಂದು ಪುಸ್ತಕ ಪ್ರಕಟಣೆ, ಇನ್ನೊಂದು ಕೇಳುವವರು ಗತಿಯಿಲ್ಲದ ಯುವ ಲೇಖಕರ ಬರಹಗಳಿಗೆ ವೇದಿಕೆ- ಮಾನ್ಯತೆ ಒದಗಿಸಿದ್ದು. ಫುಟ್ಬಾಲ್ ಆಟದಲ್ಲಿ ಚೆಂಡು ಹಿಡಿಯುವ ಗೋಲ್‌ಕೀಪರ್ ಪಾತ್ರವನ್ನು ತುಂಬಾ ಇಷ್ಟಪಡುವ ರಾಜುಮೇಷ್ಟು ಸಾಂಸ್ಕೃತಿಕ ಲೋಕದಲ್ಲಿ ಮಾಡಿದ್ದೂ ಅದೇ ರೀತಿಯ ಕೆಲಸವನ್ನೇ; ಸೃಜನಶೀಲ ಯುವ ಮನಸ್ಸುಗಳನ್ನು ಒಟ್ಟುಗೂಡಿಸುವುದು. ರಾಜು ಮೇಷ್ಟು ತನ್ನ ಸಂಪರ್ಕಕ್ಕೆ ಬಂದ ಪ್ರತಿಭೆಗಳ ಬೆನ್ನು ತಟ್ಟಿ ಅಂಗಳಕ್ಕೆ ಬಿಟ್ಟರು. ಅವರು ಆರಂಭಿಸಿದ ಬೇಂದ್ರೆ ಸ್ಮೃತಿ ಕವನ ಸ್ಪರ್ಧೆ ಹಾಗೂ ಅನಕೃ ಸ್ಮಾರಕ ಲೇಖನ ಸ್ಪರ್ಧೆಯ ಮೂಲಕ ಅನೇಕ ಯುವ ಬರಹಗಾರರು ಬೆಳಕಿಗೆ ಬಂದು ಬೆಳೆದಿದ್ದಾರೆ. ಬಹುಮಾನಿತ ಬರಹಗಳ ಪುಸ್ತಕಗಳ ನೋಡಿ ಬರವಣಿಗೆಯ ಕಿಚ್ಚು ಹತ್ತಿಸಿಕೊಂಡವರೂ ಉಂಟು. ಪ್ರಜಾವಾಣಿ ದೀಪಾವಳಿ ಕಥಾಸ್ಪರ್ಧೆಗೆಂದೇ ಕಥೆ ಬರೆದಂತೆ, ಕನ್ನಡ ಸಂಘದ ಸ್ಪರ್ಧೆಗೆಂದೇ ಪದ್ಯ ಬರೆದವರೂ ಇದ್ದಾರೆ. ಇನ್ನು ಪ್ರಕಟಣೆಯ ವಿಷಯ: ಒಂದುನೂರ ಎಪ್ಪತ್ತಕ್ಕೂ ಹೆಚ್ಚು ಪುಸ್ತಕಗಳನ್ನು ರಾಜುಮೇಷ್ಟು ಕನ್ನಡ ಸಂಘದ ಮೂಲಕ ಪ್ರಕಟಿಸಿದ್ದಾರೆ. ಇವುಗಳಲ್ಲಿ ಕವಿಗಳ ಮೊದಲ ಸಂಕಲನಗಳು ಬಹುಸಂಖ್ಯೆಯಲ್ಲಿರುವುದನ್ನು ಗಮನಿಸಬೇಕು. ಎಚ್.ಎಸ್.ಶಿವಪ್ರಕಾಶ್, ಎಸ್.ಮಂಜುನಾಥ್, ಪ್ರತಿಭಾ ನಂದಕುಮಾರ್, ಅಬ್ದುಲ್



ರಷೀದ್, ಟಿ.ಎನ್.ಸೀತಾರಾಂ, ಅಮರೇಶ ನುಗಡೋಣಿ, ಬಸವರಾಜ ಕಲ್ಗುಡಿ, ಎಚ್.ಎಸ್.ರಾಘವೇಂದ್ರ ರಾವ್, ಕೆ.ಎನ್. ಹನುಮಂತಯ್ಯ ಅವರ ಮೊದಲ ಪುಸ್ತಕಗಳನ್ನಿಲ್ಲಿ ನೆನಪಿಸಿಕೊಳ್ಳಬಹುದು. ಈ ಕಾರಣಗಳಿಂದಲೇ ಹೇಳುವುದು- ಶ್ರೀನಿವಾಸರಾಜು ಒಂದು ವಿಶ್ವವಿದ್ಯಾಲಯ!

ಬರೆಸುವುದರಲ್ಲೇ ಹೆಚ್ಚಿನ ಸುಖ ಕಂಡ ರಾಜುಮೇಷ್ಟ್ರು ಸ್ವತಃ ತಾವು ಬರೆದದ್ದು ಕಡಿಮೆ. ಕಥೆ, ಕವಿತೆ, ವಿಮರ್ಶೆ ಎಂದು ಪುರುಸೊತ್ತಾದಾಗ ಬರೆದಿದ್ದಾರಾದರೂ, ಅವರಿಗೆ ಹೆಸರು ತಂದು ಕೊಟ್ಟಿರುವುದು ಮೂಕ ನಾಟಕಗಳು. ಮಾತಿಲ್ಲದ, ಕ್ರಿಯೆಯೇ ಜೀವಾಳವಾದ ಈ ಮೂಕ ನಾಟಕಗಳನ್ನು ವಿಭಿನ್ನ ಪ್ರಯೋಗಗಳು ಎಂದು ಗುರ್ತಿಸಲಾಗಿದೆ. ಆರ್ಯಭಟ, ವಿಶ್ವೇಶ್ವರಯ್ಯ, ಸಂಸ, ಮನು ಪ್ರಶಸ್ತಿಗಳು ರಾಜುಮೇಷ್ಟ್ರಿಗೆ ಸಂದಿವೆ. ಕೋಲಾರ ಜಿಲ್ಲಾ ಏಳನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ ವಹಿಸಿದ್ದಾರೆ. ಕ್ರೈಸ್ಟ್ ಕಾಲೇಜಿನ ಕರ್ತವ್ಯದ ಕೊನೆಯ ದಿನಗಳಲ್ಲೇ ಕನ್ನಡ ಸಂಘಕ್ಕೆ ಸಂದ ಪುಸ್ತಕ ಪ್ರಾಧಿಕಾರದ 'ಉತ್ತಮ ಪ್ರಕಾಶಕ' ಪ್ರಶಸ್ತಿ ಅವರ ಸೇವೆಗೆ ಸಂದ ಮನ್ನಣೆಯೂ ಹೌದು.

ಶ್ರೀನಿವಾಸರಾಜು ಸಾಹಿತ್ಯ ಪರಿಚಾರಕನಾಗಿ ಬೆಳೆದುಬಂದ ಬಗೆ ಅಚ್ಚರಿ ಹುಟ್ಟಿಸುವಂತಿದೆ. ಅವರು ಕಲಿತದ್ದು ಬಿ.ಎಸ್ಸಿ. ಮಗ ಪೊಲೀಸ್ ಇಲಾಖೆಗೆ ಸೇರಬೇಕೆಂಬ ಆಸೆ ಅಪ್ಪನಿಗಿತ್ತು. ಇದೇ ಹೊತ್ತಿನಲ್ಲಿ ದಾವಣಗೆರೆಯಲ್ಲಿ ಇಂಜನಿಯರಿಂಗ್ ಸೀಟೂ ಸಿಕ್ಕಿತ್ತು. ಆದರೆ ಮಗ ಕಣ್ಣಳತೆಯಲ್ಲಿಯೇ ಇರಬೇಕೆನ್ನುವ ಚಿಕ್ಕರಾಜು-ಸಾವಿತ್ರಮ್ಮ ದಂಪತಿಗಳ ಆಸೆಯಿಂದಾಗಿ ಶ್ರೀನಿವಾಸರಾಜು ಇಂಜನಿಯರ್ ಆಗಲಿಲ್ಲ ಪೊಲೀಸೂ ಆಗಲಿಲ್ಲ. ಆದದ್ದು 'ಲೋಹ ಅಭಿವೃದ್ಧಿ ಮಂಡಳಿ'ಯಲ್ಲಿ ಸಾರಿಗೆ ಅಧಿಕಾರಿ. ಯಾಂತ್ರಿಕ ಚಾಕರಿ ಸಾಕೆನ್ನಿಸಿದಾಗ ಬಿ.ಎ. ಕ್ಲಾಸಿಗೆ ಸೇರಿಕೊಂಡರು. ಎಂ.ಎ. ಓದಿನ ಸಮಯದಲ್ಲಿ ದೊರೆತ ಕೆ.ವಿ.ನಾರಾಯಣ, ಎಚ್.ಎಸ್. ರಾಘವೇಂದ್ರ ರಾವ್, ಕಿ.ರಂ.ನಾಗರಾಜು ಮುಂತಾದ ಗೆಳೆಯರು ಹಾಗೂ ಮುಗಳಿ, ಶಿವರುದ್ರಪ್ಪ, ರಾಜರತ್ನಂ, ವೀಸೀ ಮುಂತಾದ ಮೇಷ್ಟ್ರುಗಳ ಒಡನಾಟ, ಸೆಂಟ್ರಲ್ ಕಾಲೇಜು ಲೈಬ್ರರಿ ಮುಂದಿನ 'ಪಿಪಿ ಕಟ್ಟೆ' (ಪೋಲಿ ಪಟಾಲಂ ಕಟ್ಟೆ)ಯ ಸಂಜೆಯ ಸಭೆಗಳು ಶ್ರೀನಿವಾಸರಾಜು ಮೇಲೆ ಗಾಢ ಪರಿಣಾಮ ಬೀರಿದವು. ಇದೇ ಸಮಯದಲ್ಲಿ ರಾಜು ಅವರನ್ನು ಆಕರ್ಷಿಸಿದ ಇನ್ನೊಂದು ಶಕ್ತಿ ಜಿ.ಪಿ.ರಾಜರತ್ನಂ ಹಾಗೂ ಸೆಂಟ್ರಲ್ ಕಾಲೇಜಿನಲ್ಲಿ ಅವರು ರೂಪಿಸಿ ಬೆಳೆಸಿದ ಕನ್ನಡ ಸಂಘ. ಮುಂದೆ ಕ್ರೈಸ್ಟ್ ಕಾಲೇಜಿನಲ್ಲಿ ಕನ್ನಡ ಸಂಘ ರೂಪಿಸುವಾಗ ಶ್ರೀನಿವಾಸರಾಜು ಅವರಿಗೆ ಮಾದರಿಯಾದದ್ದು ಇದೇ ಸಂಘ. ವಿಪರ್ಯಾಸ ನೋಡಿ: ಕ್ರೈಸ್ಟ್ ಕಾಲೇಜು ಕನ್ನಡ ಸಂಘಕ್ಕೆ ಬೀಜವಾಗಿದ್ದ ಸೆಂಟ್ರಲ್ ಕಾಲೇಜಿನ ಕನ್ನಡ ಸಂಘ ರಾಜರತ್ನಂ ನಂತರ ಕಳಾಹೀನವಾದಂತೆ ರಾಜುಮೇಷ್ಟ್ರು ನಂತರ ಕ್ರೈಸ್ಟ್ ಕಾಲೇಜು ಕನ್ನಡಸಂಘ ಕೂಡಾ ತೇಜಸ್ಸು ಕಳಕೊಂಡು ಪೇಲವವಾಗಿದೆ.

ರಾಜುಮೇಷ್ಟ್ರು ಅವರಿಗೀಗ 62 ವರ್ಷ (ಜನನ, ನವಂಬರ್ 28, 1942). ಇತ್ತೀಚೆಗಷ್ಟೇ ಸಣ್ಣ ಅನಾರೋಗ್ಯಕ್ಕೊಳಗಾಗಿ ಚೇತರಿಸಿಕೊಂಡಿರುವ ಅವರು, ಕಾಲೇಜು-ಪುಸ್ತಕ-ಮಾತುಕತೆ ಎಂದು ಎಂದಿನಂತೆ ಓಡಾಡುತ್ತಿದ್ದಾರೆ. ನಿವೃತ್ತಿಯ ನಂತರ ವಾದರೂ ಪೂರ್ಣಾವಧಿ ಕೈಗೆ ಸಿಗಬಹುದೆಂದು ಅವರ ಪತ್ನಿ ಸರಸ್ವತಿ ಮೇಡಂ ಬಹುಶಃ ನಿರೀಕ್ಷಿಸಿರಲಿಕ್ಕಿಲ್ಲ. ಏಕೆಂದರೆ ಕನ್ನಡ ದಾಸಯ್ಯಗಳು ಸುಮ್ಮನೆ ಕೂಡುವ ಜಾಯಮಾನದವರಲ್ಲವೇ ಅಲ್ಲ.

ಶ್ರೀನಿವಾಸರಾಜು ಅವರೊಂದಿಗೆ ಮಾತಾಡುವಾಗ ಅನೇಕರು ಅವರ ಹೆಸರಿನ ಜೊತೆಗಿನ 'ಚಿ' ಕುರಿತು ಪ್ರಶ್ನಿಸುವುದುಂಟು. ಅವರ ತಂದೆಯ ಹೆಸರು ಚಿಕ್ಕರಾಜು. ಊರು ಚಿಕ್ಕಬಳ್ಳಾಪುರ. ಮನೆಯ ಹೆಸರು ಚಿರಂಜೀವಿ. ಕನ್ನಡ ಸಾರಸ್ವತ ಚರಿತ್ರೆಯಲ್ಲೂ ರಾಜುಮೇಷ್ಟ್ರು ಚಿರಂಜೀವಿ. ವ್ಯಕ್ತಿ ಅಲ್ಪಾಯುಷಿ; ಕೃತಿ ಚಿರಂಜೀವಿ.

●

---

**ರಘುನಾಥ ಚ.ಹ.**
ಶ್ರೀರಂಗನಿಲಯ, ಬೋವಿ ಕಾಲನಿ, ನಾಗಶೆಟ್ಟಿಹಳ್ಳಿ, ಬೆಂಗಳೂರು - 560 094.

# ಆಯಾ

ಶಿವಶಂಕರಿ
ಕನ್ನಡಕ್ಕೆ: ಬಿ.ಎಸ್. ಶಿವಕುಮಾರ್

ಅದು ಸುಮಾರು ಎರಡು ಗಂಟೆ ಸಮಯ.

ಅಪರಾಹ್ನದ ಸೂರ್ಯ ಧಗಿಸುತ್ತಿದ್ದ.

ಅಡುಗೆ ಕೋಣೆಯ ಬಾಗಿಲಿನಲ್ಲಿ ವಿಶ್ರಾಂತಿ ಪಡೆಯುತ್ತಿದ್ದ ವಡಿವಂಬಾಳ್‌ಗೆ ತನ್ನ ಕೊರಳ ನಿರಿಗೆಗಳಲ್ಲಿ ಬೆವರುತ್ತಿದ್ದುದು ಅರಿವಿಗೆ ಬಂತು.

ಅವಳು ತನ್ನ ಪಕ್ಕದಲ್ಲಿದ್ದ ತಾಳೆಗರಿಯ ಬೀಸಣಿಗೆಯನ್ನು ಎತ್ತಿಕೊಂಡು ಎರಡು ಬಾರಿ ಬೀಸಿಕೊಂಡಳು. ಅವಳಿಗೆ ತೋಳು ನೋವುಂಟಾಯಿತು. ಬೀಸಣಿಗೆಯನ್ನು ಕೆಳಗಿರಿಸಿ ತನ್ನ ಸೀರೆಯ ಸೆರಗಿನ ಅಂಚಿನಿಂದ ಕುತ್ತಿಗೆಯನ್ನು ಒರೆಸಿಕೊಂಡಳು. ಅವಳಿಗೆ ನಿದ್ದೆ ಹತ್ತಲಿಲ್ಲ. ಎದ್ದು ಕುಳಿತಳು. ತಕ್ಷಣ ಅವಳಿಗೆ ತಲೆ ಸುತ್ತಿದಂತೆ ಆಯಿತು. ವಯಸ್ಸಾಗಿದ್ದರಿಂದ ಅವಳ ರಕ್ತದೊತ್ತಡದಲ್ಲಿ ಏರಿಳಿತ ಉಂಟಾಗುತ್ತಿತ್ತು. ಇದ್ದಕ್ಕಿದ್ದಂತೆ ತನ್ನ ಎದೆಯ ಎಡಭಾಗದಲ್ಲಿ ದೊಡ್ಡ ಹಕ್ಕಿಯೊಂದು ಒಳಹೊಕ್ಕು ತನ್ನ ರೆಕ್ಕೆಗಳನ್ನು ಬಡಿದಂತೆ ಅವಳಿಗೊಂದು ಅನುಭವ ಉಂಟಾಯಿತು.

ವಡಿವಂಬಾಳ್ ಮೆಲ್ಲನೆ ಎದ್ದು ನಿಂತು ಅಡುಗೆ ಕೋಣೆಗೆ ಹೋದಳು. ಬಂದು ಟೀ ಚಮಚದಷ್ಟು ಕಾಫಿ ಪುಡಿ ತೆಗೆದು ಫಿಲ್ಟರ್‌ಗೆ ಹಾಕಿ ಅರ್ಧ ಕಪ್ ಕುದಿಯುವ ನೀರನ್ನು ಸುರಿದಳು. ಅನಂತರ ಮುಚ್ಚಳವನ್ನು ಮೆಲ್ಲನೆ ಹಾಗೆಯೇ ಹಾಕಿದಳು. ಗಾಳಿ ಬೀಸುತ್ತಿರುವ ಹಿತ್ತಲಿಗೆ ಬಂದ ಆಕೆ ತುಳಸಿ ಗಿಡದ ಪಕ್ಕದಲ್ಲಿನ ಸಿಮೆಂಟಿನ ಜಗುಲಿಯಲ್ಲಿ ಕಾಲು ಚಾಚಿ ಕಾಫಿ ಡಿಕಾಕ್ಷನ್ ಫಿಲ್ಟರ್ ಆಗುವುದಕ್ಕೆ ಕಾದಳು. ಹಿತವಾದ ಗಾಳಿ ಬೀಸಿತು.

ಅಪರಾಹ್ನದ ಸೂರ್ಯನ ಕಿರಣಕ್ಕೆ ಅವಳ ಕಣ್ಣುಗಳು ಮುಚ್ಚಿಕೊಂಡವು. ಬಿಸಿಲ ಬೇಗೆಯನ್ನು ತಡೆಯಲಾಗದೆ ಕಾಗೆಯೊಂದು ಕೆರೆಯ ಬಳಿಗೆ ಹಾರಿ ಹೋಗಿ ಕೆಸರು ದಿಣ್ಣೆಯಲ್ಲಿ ಕುಳಿತು ನೀರು ಕುಡಿಯಿತು. ಅನಂತರ ಪೇರಳೆ ಮರದ ನೆರಳಿನ ಟೊಂಗೆಯಲ್ಲಿ ಕುಳಿತು ತನ್ನ ಕೊಕ್ಕನ್ನು ತೆರೆದು ತಲೆಯನ್ನು ಒಂದು ಬದಿಗೆ ಬಾಗಿಸಿ ಹೊರಲೋಕವನ್ನು ನೋಡಿತು.

ವಡಿವಂಬಾಳ್ ತಾನು ಕುಳಿತಲ್ಲಿಂದಲೆ ರಾಶಿರಾಶಿ ಹಣ್ಣುಗಳನ್ನು ನೀಡಿದ ಮರದತ್ತ ನೋಡಿದಳು. ಈ ಮರಕ್ಕೆ ಈಗ ಎಷ್ಟು ವಯಸ್ಸಿರಬಹುದು? ಸುಮಾರು ಇಪ್ಪತ್ತು ವರ್ಷವಿರಬಹುದು....? ಆಗಿರುತ್ತದೆ.

ಮೋಹನ ಇನ್ನೂ ಮಗುವಾಗಿದ್ದಾಗ ಅವಳ ಗಂಡ ತನ್ನ ಸ್ನೇಹಿತ ಕೊಟ್ಟ ಗಿಡವನ್ನು ಮನೆಗೆ ತಂದು ನೆಟ್ಟದ್ದು. ಮೋಹನನಿಗೆ ಹತ್ತು ವರ್ಷ ತುಂಬಿದಾಗ, ಮರವು ಬೇಗನೆ ಬೆಳೆದು ಕೊಂಬೆಗಳನ್ನು ಚಾಚಿ ಗೋಣಿ ಚೀಲ ತುಂಬ ಹಣ್ಣು ಬಿಡಲು ಆರಂಭಿಸಿತು.

ಅದೊಂದು ದೊಡ್ಡ ಅದೃಷ್ಟವೆಂದು ನೀವು ಹೇಳಬಹುದು-ಯಾಕೆಂದರೆ, ಹಣ್ಣು ತಳದಲ್ಲಿ ಉರುಟಾಗಿದ್ದು, ಅಂಚಿನಲ್ಲಿ ಚೂಪಾಗಿ ಲಿಂಬೆ ಹಣ್ಣಿನ ಗಾತ್ರವಿದೆ. ಆದರೆ, ನೀವು ಅದನ್ನು ಒಡೆದರೆ ಅದು ಸ್ವಲ್ಪ ಬೀಜಗಳಿಂದ

ಕೂಡಿದ್ದು ಪುಷ್ಟಿಯಾಗಿ ಕೆಂಪಾಗಿರುತ್ತದೆ. ಒಮ್ಮೆ ಬಾಯಲ್ಲಿಟ್ಟರೆ ಸಕ್ಕರೆಯಂತೆ ಕರಗುತ್ತದೆ.

ಹುಡುಗನಾಗಿದ್ದಾಗ, ಮೋಹನ್ ಯಾವಾಗಲೂ ಮರದಲ್ಲೆ ಕುಳಿತಿರುತ್ತಿದ್ದ. ಶಾಲೆಯ ರಜಾ ದಿನಗಳಲ್ಲಿ ತನ್ನ ಸ್ನೇಹಿತರೊಂದಿಗೆ ಆತ ಮಾಡಿದ



ತುಂಟಾಟ ಅದೆಷ್ಟು! ಅದೇ ಮೋಹನನಿಗೆ ಈಗ ಮದುವೆಯಾಗಿ ಮೂರು ತಿಂಗಳ ಮಗುವಿದೆ!

ತನ್ನ ಗಂಡನೊಂದಿಗಿನ ಸಂತಸದ ಕ್ಷಣಗಳು ಹಾಗೂ ತನ್ನ ಮಗನ ನೆನಪಾಗಿ ಅವಳ ಕಣ್ಣುಗಳಲ್ಲಿ ನೀರು ತುಂಬಿತು. ರಾಜನಂತೆ ಬದುಕಿದ ಮನುಷ್ಯ ಕ್ಷಣದಲ್ಲೆ ತೀರಿ ಹೋದ, ನಾನಿಲ್ಲಿ ಕುಳಿತಿದ್ದೇನೆ, ವ್ಯರ್ಥ....

ಅಕ್ಟೋಬರ್ ಬಂದರೆ ಅವಳ ಗಂಡ ತೀರಿ ಹೋಗಿ ಮೂರು ವರ್ಷವಾಗುತ್ತದೆ. ಅದು ನೆನಪಿಗೆ ಬಂದು ನೋವುಂಟಾಯಿತು. ವಡಿವಂಬಾಳ್ ಕಂಬಕ್ಕೊರಗಿ ಕಣ್ಣುಗಳನ್ನು ಮುಚ್ಚಿಕೊಂಡಳು. ಕಳೆದು ಹೋದ ಗಂಡ ಹಾಗೂ ಉತ್ತರ ಭಾರತದಲ್ಲಿ ನೆಲೆಸಿರುವ ಒಬ್ಬನೇ ಮಗ. ಅನಾಥ ಬದುಕಿನ ಏಕಾಂಗಿತನದಿಂದ ಬೇಸತ್ತು ಅವಳ ಕಣ್ಣೀರು ನಿಧಾನವಾಗಿ ಮುಚ್ಚಿಕಣ್ಣುಗಳಿಂದ ಕೆನ್ನೆಗಳ ಮೇಲೆ ಜಾರಿತು.

ವಡಿಂಬಾಳ್‌ಗೆ ಐವತ್ತೆಂಟರ ಹರೆಯ. ಇನ್ನೂ ನೆರೆಯುವ ಮುನ್ನವೇ ಹನ್ನೆರಡರ ಪ್ರಾಯದಲ್ಲಿ ಅವಳು ಗೃಹಿಣಿಯಾಗಿದ್ದಳು. ನಟೇಶನ್ ಬದುಕಿರುವ ತನಕ ಈ ಬದುಕಿನ ಹೊರಗೊಂದು ಲೋಕವಿದೆ ಎಂಬ ಅರಿವೇ ಇಲ್ಲದೆ ಮುಗ್ಧ ಮಗುವಿನಂತೆ ಅವಳು ಕೂಡ ಬದುಕಿದಳು. ಮನೆ, ತೋಟ, ಅಡುಗೆ, ಅವಳ ಗಂಡ ಮತ್ತು ಮಗ ಇದು ಅವಳಿಗೆ ಗೊತ್ತಿದ್ದ ಪ್ರಪಂಚ.

ನಟೇಶನ್‌ಗೆ ಹಳ್ಳಿಯಲ್ಲಿ ಹತ್ತು ಎಕರೆ ಜಮೀನಿತ್ತು. ಹೇರಳವಾಗಿ ಬೆಳೆ ಬರುತ್ತಿತ್ತು. ಒಮ್ಮೆ ಕಣಜ ತುಂಬಿ ಬೆಳೆಯನ್ನು ಮಾರಿ, ಅದರಿಂದ ಬಂದ ಹಣದಲ್ಲಿ ವರ್ಷಕ್ಕಾಗುವಷ್ಟು ಆಹಾರ ಧಾನ್ಯಗಳನ್ನು ಶೇಖರಿಸುತ್ತಿದ್ದ. ಅವನ ಹೆಂಡತಿಗೆ ಕೆಲವು ಸೀರೆಗಳನ್ನು ಹಾಗೂ ಅವಳಿಗಾಗಿ ಒಂದು ಜತೆ ಬಂಗಾರದ ಬಳೆ ಅಥವಾ ಬಂಗಾರದ ಇತರೆ ಯಾವುದಾದರೂ ಆಭರಣಗಳನ್ನು ಪ್ರತೀ ವರ್ಷ ಖರೀದಿಸುತ್ತಿದ್ದ. ಅದೇ ರೀತಿ ಭವಿಷ್ಯಕ್ಕಾಗಿ ಸ್ವಲ್ಪ ಹಣವನ್ನು ಬ್ಯಾಂಕಿನಲ್ಲಿರಿಸಿದ್ದ.

ದಂಪತಿಗೆ ಒಬ್ಬನೇ ಮಗ ಮೋಹನ್. ಹಾಗಾಗಿ ಅವರಿಗೆ ಯಾವುದರಲ್ಲೂ ಕೊರತೆ ಇರಲಿಲ್ಲ. ವಡಿವಂಬಾಳ್‌ಗೆ ಅವಳ ಮಗ ತನ್ನ ತಂದೆಯ ದಾರಿಯಲ್ಲೆ ನಡೆದು ಅವರೊಂದಿಗೆ ನೆಲೆಸಬಹುದೆಂಬ ಪೊಳ್ಳು ನಿರೀಕ್ಷೆಗಳಿದ್ದವು. ಅದು ನಡೆಯಲಿಲ್ಲ. ಅವನು ಉನ್ನತ ವಿದ್ಯಾಭ್ಯಾಸ ಪಡೆದು ಎಂಜಿನಿಯರ್ ಹುದ್ದೆ ಗಳಿಸಿದ. "ಈ ಹಳ್ಳಿ ವಾತಾವರಣ ನನಗೆ ಹಿಡಿಸುವುದಿಲ್ಲ." ಎಂದು ಹೇಳಿದ ಆತ ಮುಂಬಯಿಯಲ್ಲಿ ಉದ್ಯೋಗಕ್ಕೆ ಸೇರಿದ. ಅದು ಐದು ವರ್ಷಗಳ ಹಿಂದಿನ ಮಾತು.

"ಅವನು ಹೋಗಲಿ ಬಿಡು. ಇಲ್ಲಿರಲು ಮನಸ್ಸಿಲ್ಲದವನನ್ನು ನೀನು ಹೇಗೆ ಒತ್ತಾಯಪಡಿಸುತ್ತಿ?" ಇದು ಹೊರಜಗತ್ತಿಗೆ ನಟೇಶನ್

ತೋರಿಕೊಂಡ ನಿಲುವು. ಆದರೆ ಅವನು (ತನ್ನ ಅಂತರಂಗದಲ್ಲಿ) ಅನುಭವಿಸುತ್ತಿರುವ ನೋವೇನೆಂದು ವಡಿವಂಬಾಳ್‌ಗೆ ಗೊತ್ತು.

ಏನೇ ಆಗಲಿ, ಆಗುವುದೆಲ್ಲ ಆಗಿ ಹೋಯಿತು.

ತಮ್ಮ ಮಗ ಒಳ್ಳೆಯ ಕುಟುಂಬದ ಹುಡುಗಿಯೊಬ್ಬಳನ್ನು ಮದುವೆಯಾಗಿ ಮಕ್ಕಳನ್ನು ಪಡೆದರೆ ಮೊಮ್ಮಕ್ಕಳೊಂದಿಗೆ ಸಂತೋಷದಿಂದ ಇರಬಹುದೆಂಬ ಬಯಕೆ ಮೋಹನನ ತಂದೆ-ತಾಯಿಗೆ ಮೊಳೆಯಿತು. ಮದುವೆಗೆ ಅನುಕೂಲಕರವಾದ ಹುಡುಗಿಯರ ಮತ್ತು ಕೌಟುಂಬಿಕ ಹಿನ್ನೆಲೆ ವಿವರ ನೀಡಿ ಅವನ ಹೆತ್ತವರು ಬರೆದ ಪತ್ರಗಳಿಗೆ ಮೋಹನ್ ಯಾವುದೇ ಪ್ರತಿಕ್ರಿಯೆ ನೀಡಲಿಲ್ಲ.

ಒಮ್ಮೆ ಅವನು ರಜಾದಲ್ಲಿ ಮನೆಗೆ ಬಂದಾಗ, ಅವರು ಅವನನ್ನು ಕೇಳಿದರು: "ನೀನು ಸುಮ್ಮನಿದ್ದರೆ ಏನು ಅರ್ಥ? ನಿನಗೆ ನಮ್ಮ ಅಭಿಲಾಷೆ ಏನೆಂದು ಗೊತ್ತು ತಾನೆ?" ಆಗ ಸತ್ಯ ಹೊರಕ್ಕೆ ಬಂತು. ಅವನು ಮುಂಬಯಿಯಲ್ಲಿ ಹುಡುಗಿಯೊಬ್ಬಳನ್ನು ಇಷ್ಟಪಟ್ಟಿದ್ದಾನೆ. ಅವಳ ಹೆಸರು ಉಷಾ. ಅವಳು ಒಳ್ಳೆಯ ವಿದ್ಯಾಭ್ಯಾಸ ಹೊಂದಿರುವವಳು. ಸುಂದರಿ ಹಾಗೂ ಉದ್ಯೋಗಿ. ಅದಕ್ಕಿಂತ ಮುಖ್ಯವಾಗಿ ಅವಳಿಗೆ ಈ ಜಗತ್ತಿನ ಬಗ್ಗೆ ಆಧುನಿಕ ದೃಷ್ಟಿಕೋನವಿತ್ತು. ಅವನು ಅಂತರ್ಜಾತೀಯ ವಿವಾಹ ಮಾಡಿಕೊಳ್ಳುವುದಕ್ಕೆ ಅವನ ಹೆತ್ತವರ ವಿರೋಧವಿದ್ದರೂ ಅವನು ತನ್ನ ನಿಲುವನ್ನು ಬದಲಾಯಿಸಲು ಸಿದ್ಧವಿರಲಿಲ್ಲ.

ನಟೇಶನ್ ಹಾಗೂ ವಡಿವಂಬಾಳ್ ದಿಗ್ಭ್ರಮೆಗೊಂಡರು. ಎರಡು ದಿನಗಳ ಕಾಲ ಅವರು ಏನೆಲ್ಲ ಉಪಾಯಗಳನ್ನು ಹುಡುಕಾಡಿದರು. ಸಮಾಧಾನದಿಂದ ಮನಪರಿವರ್ತಿಸಲು ಯತ್ನಿಸಿದರು, ಬೇಡಿಕೊಂಡರು. ಅಧಿಕಾರವಾಣಿಯಿಂದ ಹೇಳಿದರು. ಆದರೆ, ಮೋಹನ್‌ನ ದೃಢ ನಿರ್ಧಾರದ ಮುಂದೆ ಅವೆಲ್ಲವೂ ನಿಷ್ಪ್ರಯೋಜಕ ಎನಿಸಿದವು. ಮತ್ತು ಆಗಲೇ ಮನಸ್ಸು ಕಲ್ಲಾಯಿತು.

ಆ ಸಂಜೆ ವಡಿವಂಬಾಳ್ ತನ್ನ ಮಗನ ವಿರೋಧವನ್ನು ಲೆಕ್ಕ ಹಾಕಿದಳು. ಅವಳ ಗಂಡನ ಪಾದಗಳನ್ನು ಹಿಡಿದು ಗೋಗರೆದಳು. ಕತ್ತಲ ಏಕಾಂಗಿತನದಲ್ಲಿ ಅವಳ ಕೆನ್ನೆಗಳಲ್ಲಿ ಕಣ್ಣೀರ ಪ್ರವಾಹವೇ ಹರಿಯಿತು. "ದಯವಿಟ್ಟು ಬಿಟ್ಟು ಬಿಡಿ... ನಮ್ಮ ಬಯಕೆಯನ್ನು ಧಿಕ್ಕರಿಸಿ ಅವನು ಹೊರಟು ಹೋದರೆ ನಮ್ಮ ಪ್ರೀತಿಯ ಸಂಬಂಧ ಕಳಂಕಗೊಳ್ಳುತ್ತದೆ."

ನಟೇಶನ್ ಅವಳ ನಿಲುವನ್ನು ಸಮ್ಮತಿಸಿದ. ಮರುದಿನ ಬೆಳಗ್ಗೆ ಎದ್ದಕೂಡಲೇ ದೂರದಲ್ಲೆ ನೆಟ್ಟ ನೋಟದಿಂದ ನೋಡುತ್ತ ಅವನು ತನ್ನ ಮಗನಿಗೆ ಹೇಳಿದ- "ನಿನಗೆ ಇಷ್ಟ ಬಂದಂತೆ ಮಾಡು" ಮುಂಬಯಿಯಲ್ಲಿ ವಿವಾಹ ಜರುಗಿತು. ಹಳ್ಳಿಯ ಜನರು ಮನ ಬಂದಂತೆ ಆಡಿಕೊಳ್ಳತೊಡಗಿದರು. ಈ ಇಳಿ ವಯಸ್ಸಿನ ದಂಪತಿ ತಮ್ಮ ಮಗನ ಮದುವೆಗೆ ಹೋಗಿದ್ದು ನೋಡಿದರೆ ಸಾಕು. ಮದುವೆಗೆ ಒಂದು ದಿನ ಮುಂಚೆ ಹೋಗಿ ಮರುದಿನ ವಾಪಸಾದರು, ಹೊರಗಿನವರಂತೆ. 'ಅವನೇನಾದರೂ ನನ್ನ ಮಗನಾಗಿದ್ದರೆ, ಅವನ ಕಾಲುಗಳನ್ನು ಮುರಿದು ಅವುಗಳನ್ನು ಕುದಿಯುವ ನೀರಲ್ಲಿ ಹಾಕುತ್ತಿದ್ದೆ!"

"ಅವನೇನಾದರೂ ನನ್ನ ಮಗನಾಗಿದ್ದರೆ, ಅವನನ್ನು ಬೀದಿ ನಾಯಿಯಂತೆ ಓಡಿಸುತ್ತಿದ್ದೆ!"

"ಏನಿದು, ವಡಿವು? ನೀನು ಯಾಕೆ ಅವನ ಮಾತಿಗೆ ಒಪ್ಪಿದೆ? ಜಾತಕ ಹೊಂದಿಕೆಯಾಗದೆ ಈ ಸಂಬಂಧ ಒಪ್ಪಿಕೊಳ್ಳಲು ನಿನಗೆ ಹೇಗೆ ಧೈರ್ಯ ಬಂತು?" ಎಲ್ಲ ರೀತಿಯ ಟೀಕೆಗಳು, ಪ್ರಶ್ನೆಗಳು...

ವಡಿವಂಬಾಳ್ ಮತ್ತು ನಟೇಶನ್ ಯಾವುದಕ್ಕೂ ಪ್ರತಿಕ್ರಿಯಿಸಲಿಲ್ಲ. ಅವರು ಮೌನವಾಗಿದ್ದರು. ಅನಂತರ ಅವರು ಏಕಾಂತದಲ್ಲಿ ಕಣ್ಣೀರುಗರೆದರು.

ಅವನ ಅಂತರಂಗದಲ್ಲಿ ಹುದುಗಿದ್ದ ಆ ನೋವು ನಟೇಶನ್‌ಗೆ ಯಮ ಕರೆ ಬಂತೆಂಬುದನ್ನು ಸಾಬೀತುಗೊಳಿಸಿತು. ನಾಲ್ಕು ತಿಂಗಳು.. ಸರಿಯಾಗಿ ನಾಲ್ಕು ತಿಂಗಳು.

ತನಗೆ ತಲೆ ನೋಯುತ್ತದೆಂದು ಹೇಳಿ ಆತ ಮಲಗಿದ- ತಕ್ಷಣ ತನಗೆ ಎದೆನೋವೆಂದು ಹೇಳಿದ. ಅವನಿಗಾಗಿ ವಡಿವಂಬಾಳ್ ಗಿಡಮೂಲಿಕೆ ಕಷಾಯ ಮಾಡುವಷ್ಟರಲ್ಲಿ ಆತ ಇಹ ಲೋಕವನ್ನು ತ್ಯಜಿಸಿದ್ದ.

ಟೆಲಿಗ್ರಾಂ ತಲುಪಿದ ಮರುದಿನ ಮೋಹನ್ ತನ್ನ ಹೆಂಡತಿಯೊಂದಿಗೆ ಆಗಮಿಸಿದ. ಸಾಕಷ್ಟು ಕೆಲಸವಿದ್ದಂತೆ ಕಂಡುಬಂದ ಆತ ಕೆಲವು

ನಿರ್ಧಾರಗಳೊಂದಿಗೆ ಬಂದಂತೆ ಕಾಣಿಸುತ್ತಿದ್ದ. 'ಯಾಕೆ ಮೋಹನ್? ಈಗೇನು ಅವಸರ?' ಎಂದು ವಡಿವಂಬಾಳ್ ಸಂಕಟದಿಂದ ಕೇಳಿದ್ದನ್ನು ಕಿವಿಗೆ ಹಾಕಿಕೊಳ್ಳದೆ ಎಂಟು ಎಕರೆ ಭೂಮಿಯನ್ನು ಅವನು ಮಾರಿದ. ಆಕಳ ಕೊಟ್ಟಿಗೆಗೆ ಹೋಗಿ ಗದ್ದೆಯಲ್ಲಿ ಉಳುಮೆಗೆ ಬಳಸುತ್ತಿದ್ದ ಎತ್ತುಗಳನ್ನು ಮಾರಿದ.

''ನಾನು ಮುಂಬಯಿಯಲ್ಲಿ ನೆಲೆಸುತ್ತೇನೆ. ಬರಬೇಕೆಂದೆನಿಸಿದಾಗಲೆಲ್ಲ ನನಗೆ ಇಲ್ಲಿಗೆ ಬರಲು ಸಾಧ್ಯವಿಲ್ಲ. ಅಮ್ಮನನ್ನು ನಾನು ಕರೆದುಕೊಂಡು ಹೋಗುತ್ತೇನೆ. ಜವಾಬ್ದಾರಿ ಸಾಧ್ಯವಾದಷ್ಟು ಕಡಿಮೆ ಮಾಡಬೇಕೆಂದಿದ್ದೇನೆ.'' ಇಷ್ಟು ಹೇಳಿ ಅವನು ತನ್ನ ತಾಯಿಯನ್ನು ಮುಂಬಯಿಗೆ ಕರೆದುಕೊಂಡು ಹೋದ.

ವಿಶಾಲವಾದ ಅಂಗಳ, ಹಿತ್ತಿಲು, ದೊಡ್ಡದಾದ ತೋಟ ಮತ್ತು ನೆರೆಹೊರೆಯವರೊಂದಿಗೆ ಬದುಕಿದ ವಡಿವಂಬಾಳ್‌ಗೆ ಮಹಾನಗರದ ಜೀವನಕ್ಕೆ ಹೊಂದಿಕೊಳ್ಳುವುದು ಕಷ್ಟವೆನಿಸಿತು. ಅದಕ್ಕಿಂತ ಹೆಚ್ಚಾಗಿ ಆಧುನಿಕತೆಯ ತೆಕ್ಕೆಯಲ್ಲಿರುವ ಉಷಾ ಹಾಗೂ ಮೋಹನ್ ದಂಪತಿಗೆ ಹಳ್ಳಿಯ ಹೆಂಗಸೊಬ್ಬಳನ್ನು ಮನೆಯಲ್ಲಿ ಇರಿಸಿಕೊಳ್ಳುವುದು ಇನ್ನೂ ಕಷ್ಟವೆಂದೇ ಕಂಡಿತು.

ಅವಳು ನೆಲದಲ್ಲಿ ಕುಳಿತು ಊಟ ಮಾಡಬಲ್ಲಳು. ಗಟ್ಟಿಯಾಗಿ ಮಾತನಾಡುವವಳು; ನೆರೆಹೊರೆಯವರನ್ನೆಲ್ಲ ಮನೆಗೆ ಕರೆದು ಅವರ ಮಧ್ಯೆ ಕುಳಿತು ಹರಟೆ ಹೊಡೆಯುವವಳು. ಎರಡು ತಿಂಗಳಲ್ಲಿ ವಡಿವಂಬಾಳ್‌ನ ಹಳ್ಳಿಯ ಜೀವನಕ್ರಮ ಅವಳ ಮನೆಯವರಿಗೆ, ನಗರದಲ್ಲಿ ಬೆಳೆದ ಅಲ್ಲಿನವರಿಗೆ ಕಿರಿಕಿರಿ ಉಂಟು ಮಾಡಿತು. ಕೇವಲ ಆರು ತಿಂಗಳ ಅವಧಿಯಲ್ಲಿ ಅಸಮಾಧಾನ ಹಾಗೂ ಕೋಪ ತಾಪ ಬೆಳೆಯಿತು. ಗಂಡ-ಹೆಂಡತಿ ಆಫೀಸಿನಿಂದ ಕೆಲಸ ಮುಗಿಸಿ ಹಿಂದಿರುಗಿ ಬಂದಾಗ ಹಾಗೂ ವಿಶ್ರಾಂತಿ ಪಡೆಯುತ್ತಿರುವಾಗ ವಡಿವಂಬಾಳ್ ಮಧ್ಯೆ ಬಂದು ''ಹ್ಞಾ, ಏನು ಇವತ್ತು ವಿಶೇಷ?'' ಎಂದು ಕೇಳದೆ ಇರುತ್ತಿರಲಿಲ್ಲ. ಅವರಿಗೆ ನೈಟ್ ಶೋಗಳಿಗೆ ಅಥವಾ ಅವರ ಸ್ನೇಹಿತರ ಮನೆಗಳಲ್ಲಿ ಔತಣ ಕೂಟಗಳಿಗೆ ಹೋಗುವುದು ಅಸಾಧ್ಯವಾಗಿತ್ತು. ''ರಾತ್ರಿ ನನಗೊಬ್ಬಳೇ ಇರಲು ಭಯ'' ಎಂದು ವಡಿವಂಬಾಳ್ ಹೇಳುತ್ತಾಳೆ.



ಅವಳು ಅಡುಗೆ ಮಾಡಿದಳೆಂದರೆ ಆಯಿತು. ಅಡುಗೆ ಕೋಣೆ ಸಂತೆಯಾಗಿ ಬಿಡುತ್ತದೆ. ಅವಳು ಏರು ಧ್ವನಿಯಲ್ಲೇ ಮಾತನಾಡುತ್ತಾಳೆ. ಇದು ಯಾವುದೂ ಅಲ್ಲಿಗೆ ಹೊಂದಿಕೆಯಾಗಲಿಲ್ಲ. ವಡಿವಂಬಾಳ್ ಮುಂಬಯಿಗೆ ಬಂದ ಏಳು ತಿಂಗಳಲ್ಲಿ ಮೋಹನ್ ಒಮ್ಮೆ ಅವಳ ಬಗ್ಗೆ ಕನಿಕರವೋ ಎಂಬಂತೆ ಮಾತನಾಡಿದ. ''ಈ ನಗರ ನಿನಗೆ ಹಿಡಿಸುವುದಿಲ್ಲ, ಅಲ್ವೆ? ನೀನು ಇಲ್ಲಿಗೆ ಬಂದಾಗಿನಿಂದ ತಲೆನೋವು, ಕಾಲು ನೋವು ಹೀಗೆ ತೊಂದರೆ ಪಡುತ್ತಿರುವೆ. ನಿನಗೆ

ಭಾಷೆ ಅರ್ಥವಾಗದಿರುವುದು ಹಾಗೂ ಇಲ್ಲಿನ ಜನರೊಂದಿಗೆ ಬೆರೆಯಲು ಅಸಾಧ್ಯವಾಗಿರುವುದು ನಿನಗೆ ಕಷ್ಟವೆನಿಸುತ್ತದೆ. ನಿನಗೆ ಇಷ್ಟ ಬಂದಾಗ ದೇವಸ್ಥಾನಕ್ಕೆ ಹೋಗಲು ಸಾಧ್ಯವಾಗುತ್ತಿಲ್ಲ. ಹಾಗಾಗಿ.. ನಾನೇನು ಹೇಳುತ್ತೇನೆಂದರೆ... ನೀನು ವಾಪಸ್ಸು ಹಳ್ಳಿಗೆ ಹೋಗು. ನಾವು ಆಗಾಗ ಬಂದು ನಿನ್ನನ್ನು ನೋಡುತ್ತೇವೆ. ಇದು ನಿನಗೆ ಸರಿ ಎಂದೆನಿಸುವುದಿಲ್ವೆ?''

ವಡಿವಂಬಾಳ್ ತನ್ನ ಮಗನ ಮನಸ್ಸನ್ನು ಅರ್ಥಮಾಡಿಕೊಂಡಳು ಹಾಗೂ ಅವನು ಹಾಗೆ ಹೇಳುತ್ತಿರುವುದರ ನಿಜವಾದ ಹಿನ್ನೆಲೆ ಏನೆಂಬುದನ್ನೂ ಲೆಕ್ಕ ಹಾಕಿದಳು. ಒಂದು ಮಾತೂ ಆಡದೆ ಬ್ಯಾಗನ್ನು ತುಂಬಿಸಿ ಹಳ್ಳಿಗೆ ವಾಪಸಾದಳು.

''ನೀನು ಯಾಕೆ ವಾಪಸ್ಸು ಬಂದೆ?'' ಎಂದು ಹಳ್ಳಿಯ ಜನ ಕೇಳಿದ್ದಕ್ಕೆ ಅವಳು ನೀಡಿದ ಸಮರ್ಥನೆ... ''ಆ ಪೇಟೆ ನನಗೆ ಹಿಡಿಸಲಿಲ್ಲ. ತುಂಬಾ ಗಜಿಬಿಜಿ ಗದ್ದಲ! ಅಲ್ಲಿನ ಭಾಷೆ ಗೊತ್ತಿಲ್ಲ ಅಂದ್ರೆ ತುಂಬಾ ಬೇಸರ!'' ಇದು ನಡೆದದ್ದು ಸುಮಾರು ಎರಡೂವರೆ ವರ್ಷಗಳ ಹಿಂದೆ. ಮಧ್ಯೆ ಮೋಹನ್ ಎರಡು ದಿನಗಳಿಗೆ ರಜಾದಲ್ಲಿ ಬಂದು ಹೋಗಿದ್ದ. ಇದೇ ವೇಳೆ ಉಷಾ ಗರ್ಭಿಣಿಯಾದಳು. ಮೊಮ್ಮಗನೂ ಹುಟ್ಟಿದ. ಅವನಿಗೀಗ ಮೂರು ತಿಂಗಳು! ಮಗ ಹಾಗೂ ಸೊಸೆ ಒಮ್ಮೆಯೂ ಅವಳನ್ನು ನೋಡಲು ಬಂದಿಲ್ಲ. ಅವರಿಗೆ ಇಷ್ಟ ಇಲ್ಲ ಅಂದ್ರೆ ಬರುವುದು ಬೇಡ; ಆದರೆ ನನ್ನ ಮೊಮ್ಮಗನನ್ನಾದರೂ ಒಮ್ಮೆ ತೋರಿಸಬಾರದೆ?

ಬೇಸತ್ತ ವಡಿವಂಬಾಳ್ ಸುಮ್ಮನೆ ಕುಳಿತಳು. ನಂತರ ಅಡುಗೆ ಕೋಣೆಗೆ ಹೋಗಿ ಕಾಫಿ ಮಾಡಿ ಯಾಂತ್ರಿಕವಾಗಿ ಕುಡಿದಳು. ಹಿತ್ತಲಿಗೆ ಹೋಗಿ ಮತ್ತೊಮ್ಮೆ ಅಲ್ಲಿ ಕುಳಿತಳು. ಒಬ್ಬಾಕೆ ತಾಯಿಯ ದುಃಖಕ್ಕೆ ದೇವರು ಕರುಣೆ ತೋರಿದ ಎಂಬಂತೆ, ಮರುದಿನವೇ ಅಂಚೆಯಲ್ಲಿ ಮೋಹನ್‌ನಿಂದ ಪತ್ರವೊಂದು ಬಂತು.

''ನೀನು ಅಲ್ಲಿ ಒಬ್ಬಂಟಿಯಾಗಿ ಇರೋದು ನನಗೆ ಕಷ್ಟವೆನಿಸುತ್ತದೆ. ನಾನು ನಾಳ್ಕರಂದು ಬರುತ್ತೇನೆ. ನನ್ನೊಂದಿಗೆ ಹೊರಡಲು ಸಿದ್ಧಳಾಗು'' ನಾಲ್ಕೇ ನಾಲ್ಕು ಸಾಲುಗಳು.

ವಡಿವಂಬಾಳ್‌ಗೆ ಅಪರಿಮಿತ ಆನಂದ. ಹಾಲಿನ ಮಳೆಯಲ್ಲಿ ತೋಯ್ದಂತೆ ಅವಳಿಗೆ ಭಾಸವಾಯಿತು. ಕೈಯಲ್ಲಿ ಪತ್ರ ಹಿಡಿದುಕೊಂಡು ನೆರೆ ಹೊರೆಯ ಮನೆಗಳಿಗೆ ಹೋದಳು.

''ನನ್ನ ಮಗನ ಬಗ್ಗೆ ಏನೆಲ್ಲ ಕೆಟ್ಟದಾಗಿ ಮಾತನಾಡಿದಿರಿ. ಅವನು ತನ್ನ ತಾಯಿಯನ್ನು ನೋಡಿಕೊಳ್ಳಲು ಅಸಮರ್ಥ. ಅವನು ಅವಳನ್ನು ಹೊರಗೆ ಹಾಕಿದ ಎಂದು ಹೇಳಿದಿರಿ. ಈಗ ಏನು ಹೇಳುತ್ತೀರಿ?'' ಎಂದು ಕೇಳಿದ ಅವಳು ಪ್ರತಿ



ಯೊಬ್ಬರ ಎದುರಿಗೆ ಪತ್ರವನ್ನು ತೋರಿಸಿದಳು.

ವಡಿವಂಬಾಳ್ ಹೊರಡುವ ಸಿದ್ಧತೆ ಜೋರಾಗಿ ನಡೆಯಿತು. ಬಟ್ಟೆ ಬರೆಗಳನ್ನೆಲ್ಲ ತುಂಬಿಸಿದಳು. ಅದರೊಂದಿಗೆ ಇಡ್ಲಿ ಅಕ್ಕಿ ಹಾಗೂ ಬಿಳಿ ಅಕ್ಕಿ ಕೂಡ. ಸಂಡಿಗೆ, ಹಪ್ಪಳ, ಉಪ್ಪಿನಕಾಯಿ, ಹಲವು ಬಗೆಯ ತಿಂಡಿಗಳನ್ನು ಸಿದ್ಧಗೊಳಿಸಿದಳು. ನಿಗದಿಯ ವೇಳೆಗೆ ಮೋಹನ್ ಬಂದ. ತನ್ನ ತಾಯಿಯನ್ನು ಕರೆದು ಕೊಂಡು ಮುಂಬಯಿಗೆ ತೆರಳಿದ.

ವಡಿವಂಬಾಳ್‌ಗೆ ಎಲ್ಲಿಲ್ಲದ ಸಂಭ್ರಮ.

ಅವರು ಮುಂಬಯಿಗೆ ಬಂದರು. ಅವಳ ಮೊಮ್ಮಗ ಕ್ಷೀಣವಾಗಿದ್ದ. ಮನೆಯಿಡೀ ಅಸ್ತವ್ಯಸ್ತ ವಾಗಿತ್ತು. ಅದಕ್ಕೆ ಸರಿಯಾಗಿ, ಉಷಾಳ ಆಫೀಸಲ್ಲಿ ತುಂಬಾ ಕಟ್ಟುನಿಟ್ಟು. ಅವಳ ಹೆರಿಗೆ ರಜಾವನ್ನು ವಿಸ್ತರಿಸಲೂ ಅವರು ಒಪ್ಪಲಿಲ್ಲ. ಅದರಿಂದಾಗಿ ಹೆರಿಗೆಯ ನಲ್ವತ್ತೈದು ದಿನಗಳ ನಂತರ ಅವಳು ಕೆಲಸಕ್ಕೆ ಹಾಜರಾಗಬೇಕಾಗಿತ್ತು.

ಒಮ್ಮೆ ಅವರಿಬ್ಬರೂ ಕೆಲಸಕ್ಕೆ ಹೋಗಿದ್ದಾಗ ವಡಿವಂಬಾಳ್ ಮಗುವಿಗೆ ಸ್ನಾನ ಮಾಡಿಸಿ, ಹಾಲು ಕುಡಿಸಿ, ಜೋತು ಹಾಕಿದ ಬಟ್ಟೆಯ ಜೋಲಿಯಲ್ಲಿ ಮಲಗಿಸಿ ನಿದ್ದೆ ಹೋಗುವ ತನಕ ತೂಗಿದಳು. ಬಟ್ಟೆಯನ್ನೆಲ್ಲ ಮಡಚಿಟ್ಟಳು. ಮನೆಯನ್ನು ಗುಡಿಸಿ ಒರೆಸಿದಳು. ನಿದ್ದೆಯಿಂದ ಎದ್ದ ಮಗುವನ್ನು ನೋಡಿಕೊಳ್ಳುತ್ತ ಅಡುಗೆ ಕೋಣೆಯ ನೆಲವನ್ನು ಸೋಡಾ ಪುಡಿ ಹಾಕಿ ಸ್ವಚ್ಛಗೊಳಿಸಿದಳು. ಅನಂತರ ಅಡುಗೆ ಮಾಡಿ ಉಂಡಳು. ಮೂರು ಗಂಟೆಯ ವೇಳೆಗೆ ಕೆಲಸ ಮುಗಿಸಿ ಸಮಾಧಾನದ ನಿಟ್ಟುಸಿರು ಬಿಟ್ಟು, ಕಾಲು ಚಾಚಿ ನೆಲದಲ್ಲಿ ಕುಳಿತು ಕೊಳ್ಳುವಷ್ಟರಲ್ಲೆ ಕರೆಗಂಟೆ ಸದ್ದು ಮಾಡಿತು.

ಅವಳು ಹೊರಕ್ಕೆ ಇಣುಕಿದಳು.

ಎದುರುಗಡೆ ಫ್ಲಾಟ್‌ನ ಹೆಂಗಸು. ಕಳೆದ ಬಾರಿ ಬಂದಿದ್ದಾಗ ವಡಿವಂಬಾಳ್ ಆಕೆಯನ್ನು ನೋಡಿ ದ್ದಳು. ಬಾಗಿಲು ತೆರೆದು ''ಒಳಕ್ಕೆ ಬನ್ನಿ'' ಎಂದು ಕರೆದಳು. ''ಹೇಗಿದ್ದೀರಿ ಆಂಟಿ? ನೀವು ನಿನ್ನೆ ರಾತ್ರಿ ಬಂದಿರಲ್ವೆ? ರೈಲು ಪ್ರಯಾಣದಿಂದ ನಿಮಗೆ ಆಯಾಸ ಆಗಿರಬೇಕು. ನಿಮಗೆ ತೊಂದರೆ ಕೊಡೋದು ಬೇಡ ಅಂತ ನಾನು ಬೆಳಗ್ಗೆ ಬರಲಿಲ್ಲ....'' ಮನೆಗೆ ಬಂದ ಹೆಂಗಸು ಸುತ್ತ ಒಮ್ಮೆ ಕಣ್ಣುಹಾಯಿಸಿದಳು.

''ಈಗ ಇದೊಂದು ಮನೆ ಥರ ಕಾಣಿಸ್ತಾ ಇದೆ! ಇನ್ನು ಮುಂದೆ ಉಷಾಳಿಗೆ ಯಾವುದೇ ತಲೆ ನೋವಿಲ್ಲ.... ಕಳೆದ ಎರಡು ತಿಂಗಳಿಂದ ಅವಳಿಗೆ ಯಾರೂ ಸಹಾಯಕ್ಕಿಲ್ಲದೆ ತೊಂದರೆ ಉಂಟಾಗಿತ್ತು. ಮನೆ, ಅಡಿಗೆ ಕೆಲ್ಸ, ಮಗು, ಆಫೀಸು ಕೆಲ್ಸ... ಅವಳು ತುಂಬ ಕಷ್ಟಪಟ್ಟಳು. ಮಗುವನ್ನು ಯಾರ ಬಳಿ ಬಿಡಲೂ ಅವಳಿಗೆ ನಂಬಿಕೆ ಇರಲಿಲ್ಲ. ಇಲ್ಲಿನ ಆಯಾಗಳ ಕಥೆ ಕೇಳಿದರೆ ಮಗುವಿಗೆ ಮಾದಕ ವಸ್ತು ನೀಡಿ ಅಥವಾ ಬ್ರಾಂದಿ ಕುಡಿಸಿ, ಮನೆ ಬಿಟ್ಟು ಹೊರಗಡೆ ಸುತ್ತಾಡಲು ಹೋಗುತ್ತಾರೆ! ಉಷಾಳ ತಾಯಿಗೆ ಹುಷಾರಿಲ್ಲ. ಹಾಸಿಗೆ ಹಿಡಿದಿದ್ದಾರೆ. ಪಾಪ ಅವಳಿಗೆಷ್ಟು ಕಷ್ಟ. 'ನನ್ನ ಅತ್ತೆಯವರನ್ನು ಇಲ್ಲಿಗೆ ಬರೋದಕ್ಕೆ ಹೇಳಿದರೆ ಹೇಗೆ?' ಎಂದು ಅವಳು ಪ್ರಸ್ತಾಪಿಸಿದಾಗ, ನಾನೇ ಅವಳಿಗೆ ತಕ್ಷಣ ಕರೆದುಕೊಂಡು ಬರುವಂತೆ ಹೇಳಿದ್ದು''. ಮನೆಗೆ ಬಂದಾಕೆ ಹರಟೆ ಹೊಡೆಯುತ್ತಿದ್ದಂತೆ, ವಡಿ ವಂಬಾಳ್ ಮನದಲ್ಲಿ ಏನೋ ಯೋಚನೆ ಬಂತು. ಹಾಗಿದ್ದರೆ... ನಾನು ಒಬ್ಬಳೇ ಅಲ್ಲಿ ಕಷ್ಟಪಡುತ್ತಿ ದ್ದೇನೆಂದಾಗಲೀ, ನನ್ನೊಂದಿಗೆ ಇರಬೇಕೆಂದಾಗಲೀ ಅವರು ನನ್ನನ್ನು ಕರೆದು ತಂದಿಲ್ಲ! ಅವರಿಗೆ ನಂಬಿಗಸ್ಥ ಆಯಾಳ ಆಗತ್ಯವಿತ್ತೆಂಬ ಕಾರಣಕ್ಕಾಗಿ ಮಾತ್ರವೇ ಅವರು ನನ್ನ ಬಗ್ಗೆ ಜ್ಞಾಪಿಸಿಕೊಂಡದ್ದು? ದುಃಖವನ್ನು ತಡೆದುಕೊಳ್ಳುತ್ತ, ''ದಯವಿಟ್ಟು ಕುಳಿತುಕೊಳ್ಳಿ. ನೀವು ನಿಂತುಕೊಂಡೇ ಮಾತನಾಡುತ್ತಿದ್ದೀರಿ...'' ಎಂದಳು.

ಇಷ್ಟು ಹೇಳುತ್ತಿದ್ದಂತೆ ಅವಳ ಧ್ವನಿ ಗದ್ಗದಿತವಾಯಿತು.

●



**ಬಿ.ಎಸ್. ಶಿವಕುಮಾರ್**
ಶಾಂತಿ ನಿಲಯಂ,
ಅಪ್ಪರ್ ಬೆಂದೂರ್,
ಮಂಗಳೂರು - 02.

# ಹಳಿ



❑ ಮಮತಾ, ಸಿದ್ದಾಪುರ

ಅದು ಒಂದು ಸುಂದರವೇ ಎನ್ನಿಸಿಕೊಳ್ಳಬಹುದಾದಂತಹ ರಾತ್ರಿಯಾಗಿತ್ತು. ಮಳೆಯೇ ದೃಶ್ಯ ಮತ್ತು ಶಬ್ದ ಎರಡೂ ಆಗಿರುವಾಗ ಆ ಸಣ್ಣ ಊರು ಅವುಚಿಕೊಂಡು ರಾತ್ರಿ ಕಳೆಯುತ್ತಲಿತ್ತು. ಅದೇ ರಾತ್ರಿ ಆ ಊರಿನ ರೈಲ್ವೆ ಸ್ಟೇಷನ್ನಿನಲ್ಲಿ ಎರಡು ಜನ ತಂಗಿದ್ದರು. ಎಲ್ಲವನ್ನು ನುಂಗಿ ಜೀರ್ಣಿಸಿಕೊಳ್ಳುವಂತಹ ಅಂಧಕಾರ ಮಳೆಯಲ್ಲಿ ನೆನೆದ ಸ್ಟೇಶನ್ ಕತ್ತಲಿನ ಅಸ್ತಿತ್ವವನ್ನು ಮತ್ತಷ್ಟು ಗಾಢವಾಗಿಸುವ ಮೇಣದ ಬತ್ತಿಯ ಮಂದವಾದ ಹಳದಿ ಬೆಳಕು ಮತ್ತು ಮಳೆಯನ್ನು ಕಿಟಕಿಯಿಂದ ನೋಡುತ್ತಿರುವ ಹೆಂಗಸಿನ ಬೆನ್ನಿನ ಆಕೃತಿ ಆ ರಾತ್ರಿಯ ಎಲ್ಲ ಕ್ಷಣಗಳು ತಮ್ಮನ್ನು ಚಿತ್ರದಲ್ಲಿ ಸ್ಥಾಪಿತಗೊಳಿಸಿ ಕಲಾಪ್ರದರ್ಶನದಲ್ಲಿ ಪ್ರದರ್ಶಿತಗೊಳ್ಳುತ್ತಿದ್ದವು ಮತ್ತು ಯಾವ ತುಣುಕುಗಳು ಬಣ್ಣ ಮತ್ತು ರೇಖೆಗಳಲ್ಲಿ ಮುಳುಗಿ ಚಿತ್ರಗಳಾಗಲಿಲ್ಲವೊ ಅವುಗಳು ಕಥೆಯಾದರೂ ಆಗಲೇಬೇಕಿತ್ತು. ಸಾಧಾರಣವಾದ ಸ್ಟೇಶನ್ ಅದರ ವೇಟಿಂಗ್ ರೂಮ್‌ನಲ್ಲಿ ಎಲ್ಲೂ ತಲುಪಲೂ ಯಾವುದೇ ನಿಯಮಿತ ಸಮಯ ಹೊಂದಿರದ ಕೆಲವಾರು ಪ್ರಯಾಣಿಕರು ಸಿಕ್ಕೇ ಸಿಗುತ್ತಾರೆ. ಪುಸ್ತಕ ಮಡಚಿ ಅವನು ತನ್ನ ಬ್ಯಾಗಿನಲ್ಲಿ ಹಾಕಿಕೊಂಡ. ಅಪರಿಚಿತ ಊರು ಅಥವಾ ಆ ಕೋಣೆಯಲ್ಲಿನ ಅಸೌಕರ್ಯದ ಯಾವುದೇ ಪರಿವೆ ಇದ್ದಿರಲಿಲ್ಲ. ಕೋಣೆಯಲ್ಲಿನ ಕತ್ತಲನ್ನು ಹೋಗಲಾಡಿಸಲು ಅವನೊಂದು ಮೊಂಬತ್ತಿಯನ್ನು ಅವಶ್ಯವಾಗಿ ಉರಿಸಿದ್ದ. ಆ ಮಂದ ಬೆಳಕಿನಲ್ಲಿ ಕಾಣುತ್ತಿದ್ದ ಅವನ ಮುಖ ನೋಡಿ ಯಾರಾದರೂ ಹೀಗೆ ಯೋಚಿಸಬಹುದಿತ್ತು. ಈ ವ್ಯಕ್ತಿಗೆ ತಾನು ಜೀವಿಸುತ್ತಿರುವ ಜಗತ್ತಿನ ಬಗೆಗೂ ಪರಿವೆ ಇದ್ದಂತಿಲ್ಲವೆಂದು. ಅವನ ತಲೆಗೂದಲೂ ಮುಖದ ಮೇಲೆ ಇಳಿದಿತ್ತು. ತನ್ನ ದೇಹ ಮತ್ತು ಬಟ್ಟೆಗಳ ಬಗ್ಗೆ ಕಾಳಜಿವಹಿಸದ ವ್ಯಕ್ತಿ ಉಳಿದವರಿಗೆ ತನ್ನ ವಯಸ್ಸಿನ ಸರಿಯಾದ ಅಂದಾಜನ್ನು ಕೊಡುವುದಿಲ್ಲ. ಬಹಳಷ್ಟು ಉದಾರತೆಯಿಂದ ಅವನನ್ನು ಯುವಕ ಎನ್ನಬಹುದಾಗಿತ್ತು. ಯಾವ



ವೃದ್ಧಾಪ್ಯ ಅವನಿಗೆ ಮತ್ತಷ್ಟು ವಿಚಾರ ಮತ್ತು ಆಲಸ್ಯವನ್ನು ಕೊಡಬಹುದಿತ್ತೊ ಅಂತಹ ವೃದ್ಧಾಪ್ಯವನ್ನು ಆತುರತೆ ಮತ್ತು ಆಸೆಯಿಂದ ಕಾಯುತ್ತಿರುವ ಯುವಕ. ಮುಖಕ್ಕೆ ಅಂಟಿಕೊಂಡಿರುವ ಧೂಳು ಮತ್ತು ಆಯಾಸದಿಂದ ಅವನ ಬಣ್ಣ ನಿಸ್ತೇಜವಾಗಿತ್ತು. ಆದರೆ ಸೂರ್ಯನ ಸತ್ವಯುತ ಬೆಳಕಿನಲ್ಲಿ ಯಾರಾದರೂ ಅವನ ಮುಖ ನೋಡಿದ್ದರೆ ಅವನ ಬಣ್ಣ ಅವನ ತುಟಿಯ ತರಹ ಗುಲಾಬಿಯೇ ಎಂದು ತಿಳಿಯುತ್ತಿದ್ದರು ಮತ್ತು ಈ ತುಟಿಗಳೇ ಇಡೀ ಅವನ ಮುಖದಲ್ಲಿ ಹತಾಶೆಯ ಭಾವವನ್ನು ಅತಿ ಕಡಿಮೆ ಹೊಂದಿತ್ತು.



ಕೋಣೆಯನ್ನು ಸರಿಯಾಗಿ ಅವಲೋಕಿಸಿದ. ಕೇವಲ ತನ್ನ ಇರುವಿಕೆಯಿಂದ ಖುಷಿಯನ್ನು ಅನುಭವಿಸುವ ವ್ಯಕ್ತಿ ಯಾವುದೇ ಭಾವನೆಯಿಂದ ದುಃಖಗೊಳ್ಳಲಾರ. ಅವನಿಗೆ ಇಷ್ಟವಾಗದಿದ್ದರೂ ಕೋಣೆಯಲ್ಲಿ ಅವನೊಡನೆ ವಾಸನೆಯೂ ಇರಬಹುದು ಎಂದು ಅವನಿಗನ್ನಿಸಿತು. ಮನುಷ್ಯರ ಸನಿಹತೆಯನ್ನು ಸಹಿಸಿಕೊಳ್ಳುವುದೇ ಕಷ್ಟ. ಅದನ್ನವನು ಅನಿವಾರ್ಯವಾಗಿಸಿಕೊಂಡಿರಲಿಲ್ಲ. ಅದೇ ಅವನ ಸ್ವಾತಂತ್ರ್ಯದ ಪರಿಭಾಷೆಯೂ ಆಗಿದ್ದಿತು. ಅನಿವಾರ್ಯತೆ ಅಥವಾ ಅಸಹಾಯಕತೆಯಿಂದಷ್ಟೇ ಅಲ್ಲ ಕೇವಲ ಸೌಜನ್ಯಕ್ಕೋಸ್ಕರ ಕೊಳೆತ ಸಂಬಂಧವನ್ನು ಹಿಡಿದುಕೊಂಡಿರುವ ಪುರುಷರ ಬಗೆಗೆ ಅವನಿಗೆ

ಸಹಾನುಭೂತಿಯಿತ್ತು. ಅವನ ಸಮಾಜದ ಹೆಂಗಸರು ಅವನೊಬ್ಬ ಕೀಳುದರ್ಜೆಯ ವಿಶ್ವಾಸಘಾತುಕ ಎಂದು ಹೇಳಿಕೊಳ್ಳುವುದನ್ನೇ ಇಷ್ಟಪಡುತ್ತಿದ್ದರು. ಅವರ ನೆನಪಾದೊಡನೆ ಅವನ ತೆಳುವಾದ ತುಟಿಗಳ ಅಂಚಿನಲ್ಲಿ ಹಗುರವಾದ ನಗುವಿನ ಅಲೆಯೊಂದು ಹರಿದುಹೋಯ್ತು. ಏಕೆಂದರೆ ಆ ಹೆಂಗಸರು ಮೂರ್ಖರಾಗಿದ್ದರು. ಅವರ ನಡುವಿನ ಈ ವ್ಯಕ್ತಿ ಎಲ್ಲೋ ದೂರ ಒಂದು ಅಪರಿಚಿತ ಊರಿನಲ್ಲಿ ಕುಳಿತು ಮಳೆಯನ್ನು ತನ್ಮಯತೆಯಿಂದ ನೋಡುತ್ತಿರುವನೆಂಬ ಸಂಗತಿ ಅವರೆಂದಾದರೂ ಅರಿಯುತ್ತಾರೆಯೇ? ಯಾವ ಗಂಡಸನ್ನು ಅವರು ಹೃದಯದಲ್ಲಿ ಪೋಷಿಸಿಯೂ ಪ್ರೀತಿಸದೇ ಇರಲು ಸಾಧ್ಯವಾಗ ಲಿಲ್ಲವೊ ಅವನು ತನ್ನ ಬಗ್ಗೆ ಜನರು ಅರಿಯು ವುದಾಗಲಿ ಯೋಚಿಸುವುದಾಗಲಿ ಇಷ್ಟಪಡದಿದ್ದ ವ್ಯಕ್ತಿಯಾಗಿದ್ದ ಎಂಬುದನ್ನಾದರೂ ಅವರು ಅರಿತಿ ದ್ದರು ಎಂಬುದು ಅಸ್ಪಷ್ಟ. ಇಂತಹ ಗುಣಸ್ವಭಾವವೇ ಅವನನ್ನು ಒಂದು ಕಡೆ ಹೆಚ್ಚು ಹೊತ್ತು ಇರದಂತೆ ಮಾಡುತ್ತಿದ್ದುದು ವಿನಾ ಅವರ ಆಕರ್ಷಣೆಯಲ್ಲಿನ ಯಾವುದೇ ಕೊರತೆಯಲ್ಲ ಎಂಬ ಸಂಗತಿ ಯೇನಾದರೂ ಅವರು ಅರಿತಿದ್ದಲ್ಲಿ ಎಷ್ಟೊಂದು ನಿರಾಳವೆನಿಸುತ್ತಿತ್ತು ಅವರ ಮನಸ್ಸಿಗೆ.

ಸಿಗರೇಟು ಸೇದುವ ಮನಸ್ಸಾಯಿತು. ಮೇಣದ ಬತ್ತಿಯನ್ನು ಆರಿಸಿದ. ಹೊರಗಿನ ತೀಕ್ಷ್ಣಗಾಳಿ ಚೂಪಾದ ಸೂಜಿಯಂತೆ ಮೆಚ್ಚುತ್ತಿತ್ತು. ತನ್ನ ಓವರ್‌ಕೋಟ್‌ನಲ್ಲಿ ಮತ್ತಷ್ಟು ಬಿಗಿಯಾಗಿ ಹುದುಗಿಕೊಂಡ. ಕಣ್ಣನ್ನು ಭಾರವಾಗಿಸುತ್ತಿದ್ದ ಆಯಾಸದಿಂದ ಒಂದು ಒಳ್ಳೆಯ ನಿದ್ದೆಯನ್ನು ಆಶಿಸಿದ್ದ. ಆದರೂ ಯೋಚಿಸತೊಡಗಿದ. ಆ ಶೀತಲ ವಿಷಣ್ಣ ವಾತಾವರಣದಲ್ಲಿ ಅದು ಸುಲಭವೂ ಆಗಿತ್ತು. ಇದಕ್ಕಿಂತ ಮುಂಚಿನ ಸುಲಭವಾದ ಜೀವನದಲ್ಲಿ ತಾನು ಹೆಚ್ಚು ಸುಖವಾಗಿದ್ದೆನೊ ಎಂದು ಯೋಚಿಸ ತೊಡಗಿದ. ಒಂದು ಸಪ್ಪಳದಿಂದ ನಿದ್ರೆಯಂತಹ ಸ್ಥಿತಿಯಿಂದ ತಾನು ಎಚ್ಚರಗೊಂಡಂತೆ ಅವನಿ ಗನಿಸಿತು. ತಾನು ಆ ಸಪ್ಪಳವನ್ನು ನಿದ್ದೆಯಂತಹ ಅವಸ್ಥೆಯಲ್ಲಿ ಕೇಳಿದ್ದೇನೆಯೋ ಅಥವಾ ವಾಸ್ತವ ದಲ್ಲೋ ಎಂದವನಿಗೆ ಒಂದು ಕ್ಷಣ ತಿಳಿಯಲೇ ಇಲ್ಲ. ಹೊರಗೆ ಮಳೆಯಿತ್ತು. ಮೊಂಬತ್ತಿ ಹಚ್ಚಿದ ಬೆಳಕಿಗೆ ಈಗಷ್ಟೇ ಅಲ್ಲಿ ದಾಖಲಾದ ಜೀವಿಯೂ ಚಕಿತಗೊಂಡಿತು. ಅವಳೊಬ್ಬ ಹೆಂಗಸಾಗಿದ್ದಳು. ಸಾಕಷ್ಟು ದೂರದಲ್ಲಿ ನಿಂತಿದ್ದಳು. ಮೊದಲೇ ತಾನೊಂದು ಸಿಗರೇಟ್ ಹೊತ್ತಿಸಿಕೊಂಡಿರದಿದ್ದಕ್ಕೆ ಅವನಿಗೆ ಬೇಸರವಾಯಿತು. ಆ ಹೆಂಗಸು ಉದ್ವೇಗ ದಲ್ಲಿದ್ದಳು. ತನಗೋಸ್ಕರ ಏಕಾಂತ ಪಡೆದಿರದಿದ್ದಕ್ಕೆ ಮತ್ತು ಬೇರೆಯವರ ಏಕಾಂತದಲ್ಲಿ ಹೀಗೆ ಧಿಗ್ಗನೆ ಹೊಕ್ಕಿದ್ದಕ್ಕೆ ಅವಳ ಉದ್ವೇಗ ಹೆಚ್ಚಾಗಿತ್ತು. ಬೇರೊಬ್ಬರು ಅಲ್ಲಿರುವುದರಿಂದ ತನ್ನನ್ನು ಸಂಬಾಳಿಸಿ ಕೊಳ್ಳುವುದು ಅವಳಿಗೆ ಅನಿವಾರ್ಯವಾಯಿತು. ಸಹಜ ಸ್ಥಿತಿಗಿಂತ ಹೆಚ್ಚಿನ ಭಾವುಕಳಾಗಿದ್ದಳು. ಅವನ ಕಡೆ ಬೆನ್ನು ತಿರುಗಿಸಿ ನಿಂತಿದ್ದಳು. ಅವಳ ಬೆನ್ನು ನೋಡಿ ನಿರಾಳತೆಯಿಂದ ಅವನೊಂದು ಸಿಗರೇಟು ಹೊತ್ತಿಸಿದ. ಕೆಲವು ವಸ್ತುಗಳಿವೆ ಜಗತ್ತಿನಲ್ಲಿ; ಹಗಲಿರುಳು ನಮ್ಮ ಜೊತೆಯಲ್ಲಿದ್ದಾಗಲೂ ಅವು ಇಷ್ಟವಾಗುತ್ತವೆ. ಅವುಗಳಲ್ಲಿ ಸಿಗರೇಟ್ ಒಂದು. ಬಹುಶಃ ಸಿಗರೇಟ್ ಒಂದೇ ಅಂತಹ ವಸ್ತುವಾಗಿ ರಬಹುದು.

ಚೂಪಾದ ಮೂಗು ಮತ್ತು ಕಣ್ಣು ಅವಳ ಮುಖಕ್ಕೆ ಉದ್ದನೆಯ ಆಕಾರ ನೀಡಿದ್ದವು. ಮುಖಕ್ಕೆ ಕವಿದಿದ್ದ ಹತಾಶೆಯಿಂದಾಗಿ ಬಾಯಿ ಇದ್ದುದಕ್ಕಿಂತ ಚಿಕ್ಕದಾಗಿ ಕಾಣುತ್ತಿತ್ತು. ಕೇವಲ ಹತಾಶೆಯ ಭಾವವೊಂದೆ ಮನುಷ್ಯನ ಮುಖದ ಮೇಲೆ ಬಹಳ ಸಹಜತೆಯಿಂದ ತೋರ್ಪಡುತ್ತದೆ. ಅವಳ ತುಟಿ ಗಳನ್ನು ನೋಡಿದಾಗ ಅವನಿಗೆ ಅವು ಮುಕ್ತವಾಗಿ ನಗಲು ಎಂದು ಅರಳಿದ್ದಲ್ಲವೇನೊ ಎಂದೆನಿಸಿತು.

"ನೀವು ಎಲ್ಲಿಗೆ ಹೋಗಬೇಕಾಗಿದೆ?"

ತನ್ನ ಪ್ರಶ್ನೆಯಿಂದ ಅವನು ಸಂತುಷ್ಟಿಗೊಳ್ಳದೆ ಇದ್ದುದು ಸ್ಪಷ್ಟವಾಗಿತ್ತು. ಆದರೆ ಅಪರಿಚಿತರ ನಡುವಿನ ಪರದೆಯನ್ನು ತೂತಾಗಿಸಲು ಏನಾದ ರೊಂದು ಹೇಳುವುದು ಅನಿವಾರ್ಯವಾಗಿತ್ತು. ಇಬ್ಬರು ಅಪರಿಚಿತರ ನಡುವೆ ಒಂದು ರಾತ್ರಿಯಷ್ಟು ಅವಧಿ ಮೌನವಾಗಿಯೇ ಕಳೆದುಬಿಡುವಷ್ಟು ಹ್ರಸ್ವವಾಗಿ ಇರುವುದಿಲ್ಲ. ಹಾಂ! ಒಂದೇ ಮಾಡಿನಡಿಯಲ್ಲಿ ಕೆಲವು ಸಂಬಂಧಗಳು ಹೆಚ್ಚಿನ ಮಾತಿಲ್ಲದೆ

ಕಳೆದುಹೋಗುತ್ತವೆ. ಅವಳು ಮೌನವಾಗಿಯೇ ಉಳಿದಳು. ಕೇಳಿಸಿಯೂ ಕೇಳಿಸದಂತೆ ವರ್ತಿಸಿದ್ದಳು ಎಂಬುದು ಸ್ಪಷ್ಟ.

''ನೀವು ಅಳುತ್ತಿದ್ದೀರಿ- ಅದಕ್ಕೆಂದು ಕೇಳಿದೆ. ಹೆಂಗಸು ಕಣ್ಣೀರನ್ನಾಗಲಿ ಕಣ್ಣೀರಿನ ಕಾರಣವನ್ನಾಗಲಿ ತನ್ನೊಳಗೆ ಇರಿಸಿಕೊಳ್ಳಲು ಇಷ್ಟಪಡುವುದಿಲ್ಲ.''

''ಈ ಊರಿನಲ್ಲಿ ನನ್ನ ಮನೆಯಿದೆ. ಮತ್ಯಾವುದೇ ಹೋಗುವಂತಹ ಸ್ಥಳವಿಲ್ಲ. ಮತ್ತೆ ನೀವು?''

ಯಾವುದೇ ಪರಿಸ್ಥಿತಿಯಲ್ಲಾದರೂ ತನ್ನ ಮಾತನ್ನು ಧೃಢತೆಯಿಂದ ವ್ಯಕ್ತಪಡಿಸುವ ಮಹತ್ವವನ್ನು ಅವಳು ಅರಿತಿದ್ದಳು. ವಿಶೇಷವಾಗಿ ಯಾರಿಗೆ ಮಾತಾಡುವ ಕಲೆ ತಿಳಿದಿದೆಯೋ ಅವರೊಂದಿಗೆ.

''ಎಲ್ಲಿಗಾದರೂ, ನೀವು ಈ ಊರಿನ ಹೆಸರು ಕೇಳಿದರೆ ನನಗೆ ಗೊತ್ತಿಲ್ಲ ಎಂದೇ ಹೇಳ ಬೇಕಾಗುತ್ತದೆ. ತಿರುಗಾಡುವುದೆಂದರೆ ತುಂಬಾ ಇಷ್ಟ. ಯಾತಕ್ಕೆ ತಿರುಗಾಡುತ್ತೇನೆ ಎಂದು ಮಾತ್ರ ಖಚಿತ ವಾಗಿ ಹೇಳುವಂತಿಲ್ಲ. ಸಮಾರಂಭಗಳಲ್ಲಿ ಎಲ್ಲಿ ಏನೂ ಕೆಲಸವಿಲ್ಲದೆ ಎಲ್ಲ ಕಡೆ ಅತ್ಯಂತ ಸಡಗರದಿಂದ ಓಡಾಡುವ ಮಕ್ಕಳ ತರಹ ಜಗತ್ತನ್ನು ಸುತ್ತಾಡಿದ್ದೇನೆ.

''ನಿಮಗಿದು ಸುಲಭ''

''ನೀವೇನೆಂದು ತಿಳಿದುಕೊಂಡಿದ್ದೀರಿ ನನ್ನನ್ನು''

''ಕೊಲೆಗಾರ ಅಥವಾ ಕಲಾವಿದ''

''ಕೊಲೆಗಾರನಾಗುವ ಅವಕಾಶ ನನಗೆ ಸಿಗಲಿಲ್ಲ ಮತ್ತು ಅವಕಾಶ ಮಾಡಿಕೊಳ್ಳುವಷ್ಟು ಧೈರ್ಯ ನನ್ನಲ್ಲಿರಲಿಲ್ಲ; ಕಲಾವಿದನಾದೆ. ಇದು ನನ್ನ ಜೀವನದಲ್ಲಿ ನಡೆದ ಅತ್ಯಂತ ಒಳ್ಳೆಯ ಸಂಗತಿ. ನನ್ನಲ್ಲಿನ ದೋಷಗಳಿಂದ ಶಾಪಗ್ರಸ್ತಗೊಳ್ಳುತ್ತೇನೆ. ನಾನು ನರಕಕ್ಕೇನೆ ಹೋಗಬಹುದೇನೊ ಆದರೆ ನನ್ನ ಕಲೆ ಮುಕ್ತ. ಅದು ಇಲ್ಲಿಯೇ ಇರುತ್ತದೆ.''

''ನಾನು ನನ್ನ ನರಕ ಕಡೆಗೆಂದು ತೆಗೆದಿಡು ವಂತಿಲ್ಲ. ಈಗಲೇ ಅನುಭವಿಸಬೇಕು. ಕಲೆಯಲ್ಲಿ ಯಾವುದೇ ಆಸಕ್ತಿ ಇಲ್ಲ.''

''ಆದರೆ ನನಗೆ ಈ ವಾತಾವರಣದ ಬಗೆಗೆ, ಈ ರಾತ್ರಿಯ ಬಗ್ಗೆ, ನಿಮ್ಮ ಬಗ್ಗೆ ಆಸಕ್ತಿ ಉಂಟಾಗಿದೆ. ನಿಮ್ಮ ಬದುಕು ನಿಷ್ಫಲವಾಗಿದೆ, ಅದರಲ್ಲಿ ಹೊಸತನವಿಲ್ಲ ಎಂದೇನಾದರೂ ಹೆಂಗಸರಿಗೆ ಹೇಳಿದರೆ ಅದರನ್ನವರು ಒಪ್ಪಿಕೊಳ್ಳುವುದಿಲ್ಲ. ಆದರೆ ನಿಮಗೆ ನಿಮ್ಮ ಬದುಕಿನ ನಿರರ್ಥಕತೆಯ ಅರಿವಿದೆ.''

ತನ್ನ ಬಗ್ಗೆ ನಿರ್ಭಿಡೆಯ ಮಾತುಗಳನ್ನು ಅಪರಿಚಿತನಿಂದ ಕೇಳುವುದು ಅವಳಿಗೆ ಇಷ್ಟ ವಾಗಲಿಲ್ಲ. ಅವಳು ಅವನ ಕಣ್ಣನ್ನು ನೋಡಿದಳು. ಅವುಗಳಲ್ಲಿ ವ್ಯಂಗ್ಯವಿರಲಿಲ್ಲ. ಆ ಅಪರಿಚಿತ ಅಥವಾ ಅವನ ಮಾತು ಅವಳಿಗೆ ಸ್ವಲ್ಪವೂ ಅಪ್ರಿಯ ಎನಿಸುತ್ತಿರಲಿಲ್ಲ ಅವಳಿದ್ದ ಪರಿಸ್ಥಿತಿಯ ಬಗ್ಗೆ ಅವಳಿಗೆ ಕೆಡುಕೆನ್ನಿಸಿತು. ಯಾರಾದರೂ ತನ್ನ ಬಗ್ಗೆ ಏನಾದರೂ ಹೇಳಿಕೊಳ್ಳಬಹುದಾದ ಪರಿಸ್ಥಿತಿ. ಮುಂಚೆಂದೂ ಇಂತಹ ಪರಿಸ್ಥಿತಿಯ ಅನುಭವಆಗಿರಲಿಲ್ಲ. ಇವೆಲ್ಲವುಗಳಿಂದ ದೂರ ಹೋಗಿಬಿಡಬೇಕು ಎಂದೆನಿಸಿತು ಅವಳಿಗೆ. ಈ ಸ್ಥಳದಿಂದ ಶಾಮೀಲಾ ಗಿರುವ ಎಲ್ಲವುಗಳಿಂದಲೂ ದೂರ ಹೊರಟು ಹೋಗಿಬಿಡಬೇಕೆಂದು ಎನಿಸಿತು. ತಾನೊಂದು ರೋಗಗ್ರಸ್ತ ಹಕ್ಕಿಯಂತೆ ದುರ್ಬಲವಾಗಿರುವ ಅನುಭವವಾಯಿತು. ಉರಿಯುತ್ತಿರುವ ಮೊಂಬತ್ತಿಯ ಮೇಲೆ ಕಣ್ಣಾಡಿಸಿದಳು. ಆ ಕೋಣೆ ಯಲ್ಲಿ ಮೂರನೆಯ ಜೀವಂತ ವಸ್ತುವಾಗಿದ್ದಿತ್ತದು.

ಘಾಸಿಗೊಂಡ ಧ್ವನಿಯಲ್ಲಿ ಹೇಳಿದಳು.

''ವಿಚಿತ್ರ ಪರಿಸ್ಥಿತಿಗಳಲ್ಲಾದರೂ ಸ್ವಲ್ಪ ಸಮಯ ಕ್ಕಾದರೂ ಸರಿ, ನನ್ನನ್ನು ದುಃಖಿ ಎಂದು ತಿಳಿದುಕೊಳ್ಳುವ ಅಧಿಕಾರ ನಿಮಗಿಲ್ಲ.''

''ಸ್ವಲ್ಪ ಸಮಯಕ್ಕೇನು, ಆ ಅಧಿಕಾರ ಮನುಷ್ಯನಿಗೆ ತನ್ನ ಜೀವಿತಾವಧಿಯವರೆಗೂ ಸಿಗಬಾರದು. ಬೇರೆಯವರಿಗೆ ಸಹಾಯ ಮಾಡು ವಷ್ಟು ಯೋಗ್ಯತೆ ತನಗಿದೆ ಎಂದು ತಿಳಿದುಕೊಳ್ಳುವ ಚಟ ಯಾರಿಗಾದರೂ ಅಂಟಿಕೊಂಡರೆ ಅವನು ಎಲ್ಲರನ್ನೂ ದುಃಖಿಗಳು ಎಂದು ನಿಷ್ಕರ್ಷಿಸುವ ಸ್ವಾತಂತ್ರ್ಯವನ್ನು ಪಡೆಯುತ್ತಾ ಹೋಗುತ್ತಾನೆ ಮತ್ತು ದುಃಖಿತ ವ್ಯಕ್ತಿ ತನ್ನ ಸಹಾಯ ತಾನು ಮಾಡಿ ಕೊಳ್ಳಲಾರದಷ್ಟು ಅಸಮರ್ಥ ಎಂದು ಒತ್ತಿ ಹೇಳಲು ಪ್ರಯತ್ನಿಸುತ್ತಾನೆ.''

ಈ ಮಾತುಗಳು ಈಗವಳಿಗೆ ವಿಚಿತ್ರ ಖುಷಿ ಮತ್ತು ನಿರಾಳತೆಯನ್ನು ಒದಗಿಸುತ್ತಿದ್ದವು. ಅವಳು ಗಮನವಿಟ್ಟು ಕೇಳತೊಡಗಿದಳು. ಅವಳಿಗನಿಸಿತು-

ಅವನ ಧ್ವನಿ ಬಹಳ ಮೃದು ಮತ್ತು ನಾಜೂಕಾಗಿದೆ. ವಿಷಯವೇ ಅವನ ಧ್ವನಿಗೆ ಗಡಸುತನವನ್ನು ನೀಡುತ್ತದೆ. ಮಂದವಾದ ಬೆಳಕಿನಂತೆ ಅವನು ಮಾತನಾಡುತ್ತಲೇ ಇದ್ದ.

''ನನಗೆ ನಿಮ್ಮ ದುಃಖದ ಕಾರಣ
ತಿಳಿಯಬೇಕೆಂಬ ಹಂಬಲವಿಲ್ಲ. ಜನರ ಜೀವನದಲ್ಲಿ
ಏನು ನಡೆಯುತ್ತಿದೆ ಎಂದು ತಿಳಿದುಕೊಳ್ಳುವ
ಕುತೂಹಲ ನನಗಿಲ್ಲ. ಏಕೆಂದರೆ ನನಗೆ ನನ್ನ
ಜೀವನದಲ್ಲಿ ಮಹತ್ವವಾದುದೇನೂ ಘಟಿಸುತ್ತಿಲ್ಲ
ಎಂಬುದರ ಬಗೆಗೆ ಕುತೂಹಲ ಅಥವಾ ನಿರೀಕ್ಷೆ
ಇರಲಿಲ್ಲ. ನನ್ನ ಈ ಮಾತು ನಿಮಗೆ ಅರ್ಥವಾದರೆ
ನನ್ನ ಬಗ್ಗೆ ಸಿಟ್ಟಾಗುವುದಿಲ್ಲ.
ನಾ ಬಯಸುವುದಿಷ್ಟೆ -
ನೀವು ನಿಮ್ಮ ಕಣ್ಣೀರನ್ನು
ಹೊರಕ್ಕೆ
ಹಾಕಿ.
ಆಗ
ಮಾತ್ರ ನೀವು ಆಗಿನಿಂದಲೂ ಪ್ರಯತ್ನಿಸುತ್ತಿರುವ ಸಹಜತೆಗೆ ಮರಳಬಹುದು.''

ಅವಳು ಕಿಟಕಿಯ ಹತ್ತಿರ ಹೋಗಿ ನಿಂತಳು. ಬಿರುಸಿನ ಮಳೆ, ಇದು ತಾನಿರುವ ಈ ಕೋಣೆಯನ್ನು ಬೇರು ಸಹಿತ ಕಿತ್ತೊಯ್ಯಬಾರದೇ- ಶವದ ತರಹ ತೇಲಿಸಿ ಎಂದೆನಿಸಿತವಳಿಗೆ. ಮಳೆಯನ್ನು ನೋಡುತ್ತಲೇ ಹೇಳಿದಳು.

''ನಾನು ನಾಳೆ ಬರುವವಳಿದ್ದೆ. ಇಂದೇ ಬಂದು ತಪ್ಪು ಮಾಡಿದೆ. ಕಣ್ಣಿಗೆ ಬಟ್ಟೆ ಕಟ್ಟಿಕೊಂಡು ಒಂದು ಸಂಬಂಧ ನಿಭಾಯಿಸುವುದು ಸುಲಭ. ಮನೆಯೇ ಪೂರ್ಣ ಕತ್ತಲು. ಕಣ್ತೆರೆದು ಪ್ರಯೋಜನವಿಲ್ಲ. ಅಲ್ಲಿ ನಡೆಯುವಾಗ ನಾನು ಎಡವಿ ಪದೇ ಪದೇ ನೋವು



ಮಾಡಿಕೊಳ್ಳುತ್ತೇನೆ ಎನ್ನುವುದಕ್ಕಿಂತ ನನಗೆ ತಗುಲಿ ಯಾವುದಾದರೂ ವಸ್ತು ಒಡೆದು ಹೋಗಬಹುದು ಎಂಬ ಹೆದರಿಕೆ ಹೆಚ್ಚು. ಹೀಗೆ ತಡಬಡಿಸುತ್ತ ಹನ್ನೆರಡು ವರುಷ ಕಳೆದಿದ್ದೇನೆ. ಬೆಳಕಿನ ಅಸ್ತಿತ್ವದ ಅರಿವಿದ್ದೂ ಅನುಭವಿಸಲಾಗದ ಕುರುಡುತನದಷ್ಟು ಅಸಹಾಯಕತೆ ಮತ್ತೇನಾಗಿರಲು ಸಾಧ್ಯ?''

ಬೇರೊಬ್ಬ ಹೆಂಗಸಿನೊಡನೆ ಮಲಗಿದ್ದ ತನ್ನ ಗಂಡನನ್ನು ನೋಡಿ ಮರಳಿ ಸ್ಟೇಶನ್ನಿಗೆ ಬಂದಿದ್ದಳು.

ಅವಳನ್ನು ಅವನೀಗ ಹತ್ತಿರದಿಂದ ನೋಡಿದ. ಅವಳ ಮೈಪೂರ್ತಿ ಒದ್ದೆಯಾಗಿತ್ತು. ಪೂರ್ತಿ ಒದ್ದೆಯಾಗದಂತೆ ಸ್ಟೇಷನ್ ತನಕ ಬರುವುದು ಅವಳಿಗೆ ಸಾಧ್ಯವಾಗಿರಲಿಲ್ಲ.

''ನಾನು ಇಲ್ಲೇಕೆ ಬಂದೆನೆಂದು ಗೊತ್ತಿಲ್ಲ. ಅಲ್ಲಿ ನಿಂತಿರುವುದು ಸಾಧ್ಯವಾಗಲಿಲ್ಲ'' ತನ್ನೆರಡು ಕೈಯಿಂದ ತಲೆಹಿಡಿದು ಕುಸಿದು ಕುಳಿತಳು.

ಸಿಗರೇಟ್ ಹೊಸಕಿದ. ಅವಳಲ್ಲಿಗೆ ಹೋಗಿ ಮುಖ ಮುಚ್ಚಿದ ಅವಳೆರಡೂ ಕೈಗಳನ್ನು ತನ್ನ ಕೈಯಲ್ಲಿ ಹಿಡಿದು ಅವಳ ಮುಖದ ಹತ್ತಿರ ಹೋಗಿ ಹೇಳಿದ.

''ನಿನಗೆ ಗೊತ್ತಿರುವ ವಿಷಯವನ್ನು ನಿನ್ನ ಕಣ್ಣಾರೆ ಕಂಡ ಮೇಲೂ ಯಾಕೆ ಪ್ರತಿಕ್ರಿಯಿಸಲಿಲ್ಲ.''

ಅವಳು ವಿಚಲಿತಳಾದಳು. ಇದ್ದಿಲಿನಂತಹ ಕಪ್ಪು ಕಣ್ಣುಗಳು ಉರಿದವು.

''ನನಗೆ ಗೊತ್ತಿರಲಿಲ್ಲ. ಸಂಶಯವಿತ್ತು ಮತ್ತು ಎಲ್ಲ ಹೆಂಡತಿಯರಂತೆ ನನ್ನ ಸಂಶಯವು ಕೇವಲ ಸಂಶಯವಷ್ಟೇ ಎಂಬ ಆಂತರಿಕ ಭರವಸೆಯಿತ್ತು.''

''ಗೊತ್ತಿರದಿದ್ದಲ್ಲಿ ನಿನ್ನ ಸಿಟ್ಟು ಹೇಡಿತನವಾಗಿ ಹೇಗೆ ಪರಿವರ್ತನೆಯಾಯಿತು. ಆ ಹೆಂಗಸನ್ನು ಎಳೆದೇಕೆ ಹೊರಹಾಕಲಿಲ್ಲ? ತಪ್ಪಿತಸ್ಥನಂತೆ ನಿನ್ನ ಗಂಡ ನಿನ್ನೆದುರು ನಿಲ್ಲುವಂತೆ ಏಕೆ ಮಾಡಲಿಲ್ಲ. ಏಕೆಂದರೆ ಈ ವಿಷಯದ ಬಗ್ಗೆ ನಿನಗಾವುದೇ ಆಕ್ಷೇಪವಿರಲಿಲ್ಲ. ಏಕೆಂದರೆ ಅಸುರಕ್ಷತೆಯ ಭಾವನೆ ನಿನಗೆ ಉಂಟಾಗಲಿಲ್ಲ. ತನಗೆ ಗೊತ್ತಿರುವುದನ್ನು ತನ್ನ ಮೇಲಾಗಲಿ ತನ್ನ ಗಂಡನ ಮೇಲಾಗಲಿ ವ್ಯಕ್ತಪಡಿಸುವುದರಿಂದ ನಿನ್ನ ಬಗ್ಗೆ ನಿನಗೆ ನಿಕೃಷ್ಟ ಭಾವನೆಯೇ ಉಂಟಾಗುತ್ತಿತ್ತು. ತನ್ನ ಅಹಂಕಾರದ ಕ್ಷತಿ ನಿನಗಿಷ್ಟವಿರಲಿಲ್ಲ. ಇವತ್ತು ಕಣ್ಣಾರೆ ಕಂಡಾಗ ನಿನ್ನ ಅಸಹಾಯಕತೆಯ ಬಗ್ಗೆ ಸಿಟ್ಟು ಬರುತ್ತಿದೆ ಅಷ್ಟೇ..... ನೀನು ಅಲ್ಲಿಂದಲೇ ಮುಂದುವರಿಯಬೇಕಿತ್ತು. ಹೀಗೆ ಹಿಂದಿರುಗಿ ನಿನ್ನನ್ನು ಹಿಂದೆ ಮಾಡಿಕೊಂಡು ಬಿಟ್ಟಿದ್ದಿಯಾ. ಹಿಂದಿರುಗುವ ದಾರಿಯಲ್ಲಿ ಎಂದೂ ಗುರಿಯಿರುವುದಿಲ್ಲ. ನಿನ್ನನ್ನು ಕಿನಾರೆಗೆ ತಂದು ನಿಲ್ಲಿಸಿಬಿಟ್ಟಿದ್ದಿಯಾ. ಇಲ್ಲಿಂದ ಯಾವ ದಾರಿಯೂ ಮುಖ್ಯಗುರಿಯನ್ನು ತಲುಪುವುದಿಲ್ಲ.''

''ನೀನು ಬಹಳ ನಿರ್ದಯಿ'' ಕೊರಳಿನಿಂದ ಚೀತ್ಕಾರದಂತೆ ಹೊರಟಿತ್ತು ಧ್ವನಿ, ಶಬ್ದಗಳಲ್ಲಿ ಆ ನೋವಿತ್ತು.

''ಒರೆಸಿಕೊ'' ಅವನು ಅವಳಿಗೆ ತನ್ನ ಟವೆಲನ್ನು ಕೊಟ್ಟ.

''ಪೂರ್ತಿ ನೆನೆದಿದ್ದೀಯಾ ಆರೋಗ್ಯ ಹಾಳಾಗಬಹುದು.''

ಅವಳ ತುಟಿಗಳ ಮೇಲೆ ವಿಷಾದಪೂರ್ಣ ಕ್ಷಣಗಳು ಕಂಪಿಸುತ್ತಿದ್ದವು. ಮುಂಗುರುಳು ಮಳೆಯ ನೀರಿನಿಂದ ಮುಖಕ್ಕೆ ಮೆತ್ತಿಕೊಂಡಿತ್ತು. ಅವಳು ಟವೆಲ್ ಮತ್ತು ಆ ವ್ಯಕ್ತಿಯ ಕೈಗಳನ್ನು ಹಿಡಿದು ಕೊಂಡಳು. ಆ ಮೂಳೆಗಳ ಕೈಗಳು ಬಿಸಿ ಸ್ಪರ್ಶದ ಅನುಭವ ಕೊಡುತ್ತಿದ್ದವು. ಸ್ವಲ್ಪ ಹೆಚ್ಚೇ ಉದ್ದ ಎನಿಸುವ ಆ ಬೆರಳುಗಳು ಅವಳಿಗಿಷ್ಟವಾಯಿತು.

''ಆದರೆ ನೀನು ನಿಜವನ್ನೇ ಹೇಳುತ್ತಿದ್ದಿಯಾ''

''ಇದರ ಬಗ್ಗೆ ನನಗೆ ಖೇದವಿದೆ. ನಾನು ಸಾಂತ್ವನದ ಮಾತುಗಳನ್ನಾಡದಿದ್ದರೆ ಒಳ್ಳೆಯದಿತ್ತು.''

ಅದೇಕೋ ಅವಳು ಪ್ರಜ್ಞೆತಪ್ಪಿ ಬೀಳುವ ವಳಿದ್ದಾಳೆ ಎಂದೆನಿಸಿತು ಅವನಿಗೆ. ಇಂತಹ ಯಾವ ಇಚ್ಛೆಯೂ ಅವನಲ್ಲಿರಲಿಲ್ಲ. ಆದರೆ ಈಗಾಗಲೇ ಅವಳನ್ನು ಅವಮಾನಿಸಿದ್ದ. ತನ್ನಿಂದ ದೂರ ಸರಿಸಿ ಮತ್ತಷ್ಟು ಅವಮಾನಿಸುವುದು ಅವನಿಗಿಷ್ಟವಿರಲಿಲ್ಲ. ಎಷ್ಟೊಂದು ಆಕರ್ಷಕ ಮುಖ ತಿರಸ್ಕಾರಕ್ಕೆ ಖಂಡಿತ ಅರ್ಹವಲ್ಲ. ಆ ಕೋಣೆಯಲ್ಲಿ ಆ ರಾತ್ರಿ ಎರಡನೇ ಮೊಂಬತ್ತಿ ಉರಿಯಲಿಲ್ಲ.

ಮೋಡಗಳು ತಮ್ಮನ್ನು ಸಂಪೂರ್ಣ ಹಗುರಾಗಿಸಿ ಕೊಂಡ ರಾತ್ರಿಯ ಆ ಮಳೆಯ ನಂತರವೂ ಅದೊಂದು ಶುಭ್ರವಾದ ಹಗಲೇ ಆಗಿತ್ತು. ಇಂತಹ ನಿರ್ಮಲವಾದ ಬೆಳಕಿನಲ್ಲಿ ಒಬ್ಬ ವ್ಯಕ್ತಿ ಭಾರವಾದ

ಮನಸ್ಸಿನಿಂದ ಸ್ಟೇಶನ್ನಿನ ಕಡೆ ನಡೆಯುತ್ತಿದ್ದ. ಇವತ್ತು ಅವನ ಹೆಂಡತಿ ಬರುವವಳಿದ್ದಳು. ಮೊದಲ ಸೂರ್ಯ ಕಿರಣದೊಡನೆ ಬಂದು ಸೇರಿಕೊಂಡ ಹೆಂಡತಿಯ ನೆನಪು ಅವನ ಮನಃಸ್ಥಿತಿಯನ್ನು ಕ್ಷೋಭೆಯಿಂದ ಕೂಡಿರುವಂತೆ ಮಾಡಿದ್ದವು. ಮತ್ತೊಮ್ಮೆ ಅವಳಿಗೆ ದ್ರೋಹ ಬಗೆದಿದ್ದ. ಎಷ್ಟೊಂದು ಒಳ್ಳೆಯ ಹೆಂಗಸವಳು ಮತ್ತು ತಾನವಳನ್ನು ಪ್ರೀತಿಸುತ್ತೇನೆ ಎನ್ನುವ ವಿಷಯವನ್ನಾದರೂ ಕೆಲವು ಕ್ಷಣಗಳಲ್ಲಿ ಪ್ರಜ್ಞಾಪೂರ್ವಕವಾಗಿ ಮರೆತಂತೆ ವರ್ತಿಸುತ್ತಿದ್ದೆ ಎನ್ನುವುದಾದರೂ ನಿಜವೇ ಆಗಿದ್ದಿತು. ಇನ್ನೊಮ್ಮೆ ಹಾಗೆ ಮಾಡುವುದಿಲ್ಲ ಎಂದು ತನಗೆ ತಾನು ಮಾತು ಕೊಟ್ಟುಕೊಳ್ಳುತ್ತೇನೆ. ಪಾಪಪ್ರಜ್ಞೆ ಸಾಕ್ಷಿಯಿರುವ ಆ ನಿರ್ಧಾರ ಗಂಭೀರವಾಗಿಯೂ ಇರುತ್ತದೆ. ಅದನ್ನು ಮುಂದೆ ಮುರಿಯಬೇಕೆಂಬ ಸಡಿಲಿಕೆಗೂ ಆಸ್ಪದವಿರದ ತರಹ ಬಿಗುವಾದ ಭಾವ. ಆದರೆ ಅದನ್ನು ಮುರಿಯುವ ಪ್ರಸಂಗ ಬಂದಾಗ ಕೊಟ್ಟ ಮಾತನ್ನು ಉಳಿಸಿಕೊಳ್ಳುವಷ್ಟು ಶ್ರೇಷ್ಠ ಅಥವಾ ಆ ತರಹದ ವ್ಯಕ್ತಿಯೇನಲ್ಲ, ಬದಲಾಗಿ ತೀರಾ ಸಾಧಾರಣ ಮನುಷ್ಯ ಎಂದು ಅನಿಸಿಬಿಡುತ್ತಿತ್ತು. ಮತ್ತೆ ಎಲ್ಲ ಸಾಮಾನ್ಯರಿಗೂ ಲಭ್ಯವಿರುವಂತಹ ಒಂದು ಸ್ವಾತಂತ್ರ್ಯದ ಭಾವನೆಯೂ ಅವನಿಗೆ ಸಿಗುತ್ತಿತ್ತು. ಅದೇನೆಂದರೆ ಯಾರೇನೂ ಅವನಿಂದ ಮಹಾನತೆಯನ್ನು ಆಪೇಕ್ಷಿಸುವುದೂ ಇಲ್ಲ. ಮಳೆಯಿಂದಾಗಿ ರಸ್ತೆಯೆಲ್ಲ ಕೊಚ್ಚೆಯಾಗಿತ್ತು. ತನ್ನ ಬಟ್ಟೆಗೆ ಸಿಡಿದ ಕೆಸರನ್ನು ಅನ್ಯಮನಸ್ಕನಾಗಿಯೇ ಗಮನಿಸಿದ. ಈ ಸಮಯ ಆತುರಾತುರವಾಗಿ ಮುಗಿದು ಹೋಗುವುದನ್ನು ಆಶಿಸುತ್ತಾ ಸ್ಟೇಷನ್ ತಲುಪಿದ ಕೂಡಲೇ ತನ್ನ ಚಸ್ಮವನ್ನು ಒರೆಸಿಕೊಂಡನು. ತನ್ನ ಮುಖದ ಮೇಲೆ ಸ್ಥಾಯಿಯಾಗಿರುವ ಮಂದಹಾಸದ ಮೇಲೆ ಅವನಿಗೆ ವಿಶ್ವಾಸವಿತ್ತು. ಅಲ್ಲಿ ಅವನ ಹೆಂಡತಿ ಮತ್ಯಾವ ಭಾವವನ್ನು ಕಾಣಲಾರಳು ಎಂದು ಅವಳೆಡೆ ನೋಡದೆ ಅವನು ಸಾಮಾನು ಎತ್ತಿಕೊಂಡ.

"ನಡೆ ಹೋಗೋಣ."

ಅವಳು ಅಲ್ಲಿಯೇ ನಿಂತಿದ್ದಳು. ತನ್ನ ಹೆಂಡತಿಯ ಆರೋಗ್ಯ ಸರಿಯಿರಲಿಕ್ಕಿಲ್ಲ ಎಂದೆನಿಸತವನಿಗೆ.

"ಆ ಹೆಂಗಸು ಸತ್ತಳೇನು?"

ಅವಳ ಧ್ವನಿ ಬಾಯಾರಿದ ತುಟಿಗಳಂತೆ ಒಣಗಿತ್ತು. ಅವನು ಬೆಚ್ಚಿಬಿದ್ದ.

"ಯಾವ ಹೆಂಗಸು".

"ಅಲ್ಲಿ ಹಳಿಯ ಮೇಲೆ ಒಬ್ಬ ಹೆಂಗಸು ಆತ್ಮಹತ್ಯೆ ಮಾಡಿಕೊಂಡಿದ್ದಾಳೆ."

"ನಾನು ಅಲ್ಲಿಂದಲೇ ಬಂದಿದ್ದೇನೆ. ನಾನಂತೂ ನೋಡಿಲ್ಲ."

"ಹಳದಿ ಬಣ್ಣದ ಸೀರೆ ಉಟ್ಟಿದ್ದಾಳೆ. ಅವಳ ಪೂರ್ತಿ ಶರೀರ ನುಚ್ಚು ನೂರಾಗಿದೆ. ಕೇವಲ ಒಂದು ಕೈಯನ್ನು ಅವಳು ಹಳಿಯಿಂದ ಹೊರಚಾಚಿದ್ದಾಳೆ."

ಅವಳ ಕಣ್ಣುಗಳು ನಿಸ್ತೇಜವಾಗಿದ್ದವು. ಅವುಗಳಿಂದ ಅವಳು ಏನನ್ನಾದರೂ ನೋಡುತ್ತಿದ್ದಾಳೆಯೋ ಇಲ್ಲವೊ ಎಂಬುದರ ಬಗೆಗೆ ಅವಳ ಗಂಡನಿಗೆ ಅನುಮಾನವಾಯಿತು.

ಅವನು ಹೊರಹೋಗಿ ಬಂದ.

"ಇಲ್ಲ ಅಲ್ಲಿ ಯಾರೂ ಸತ್ತಿಲ್ಲ. ನೀನು ಪ್ರಯಾಣದಲ್ಲಿ ಕೆಟ್ಟ ಕನಸನ್ನು ಕಂಡಿದ್ದೀಯಾ. ಬಹುಶಃ ಜ್ವರವೂ ಬಂದಿರಬಹುದು."

ಅವನು ಅವಳ ಕೈ ಹಿಡಿದ. ಸುಡುತ್ತಿತ್ತು. ಅವನ ದೃಷ್ಟಿ ಅವಳು ಉಟ್ಟಿರುವ ಸೀರೆಯೆಡೆ ಹೋಯಿತು. ಅದು ಹಳದಿ ಬಣ್ಣದಾಗಿತ್ತು. ಅವಳ ಜ್ವರ ನೆತ್ತಿಗೇರಿರಬಹುದು ಎಂದೆನಿಸಿತು. ಈ ವಾತಾವರಣ ಅವಳ ಸ್ಥಿತಿಯನ್ನು ಮತ್ತಷ್ಟು ಹದಗೆಡಿಸಬಹುದು.

"ನಡೆ ಹೋಗೋಣ"

ಅವಳು ಮುಂದೆ ನಡೆದಳು. ತನ್ನ ಸಾಮಾನಿನ ಜೊತೆ ಅವನು ಮತ್ತೊಂದು ವಸ್ತುವನ್ನು ಕೈಗೆತ್ತಿಕೊಂಡನು.

"ಈ ಟವೆಲ್ ಯಾರದು?"

ಅವಳು ತಿರುಗಿ ನೋಡಿದಳು. ಆ ಟವೆಲ್ ಯಾವ ವ್ಯಕ್ತಿಯದಾಗಿತ್ತೊ ಅವನು ಅವಳಿಗೆ ಹೀಗೆ ಹೇಳಿಹೋಗಿದ್ದ: ಇಡೀ ಜೀವನ ನೀನು ಮತ್ತು ನಿನ್ನ ಗಂಡ ಈ ವಿಷಯ ತಿಳಿದುಕೊಳ್ಳಲಾರಿರಿ. ನಿನ್ನೆ ರಾತ್ರಿ ಏನು ನಡೆದಿರಬಹುದೆಂದು ಅವನೆಂದೂ ತಿಳಿಯಲಾರ. ಅವನ ಜೊತೆ ಬದುಕಬೇಕೊ ಬೇಡವೊ ಎಂದು ನೀನೆಂದೂ ನಿರ್ಧರಿಸಲಾರೆ.

"ಗೊತ್ತಿಲ್ಲ ಹೊಗೋಣ" ಅವಳೆಂದಳು.

●

# ಹರಿಕಮತನ ನೆನಪು

❑ ಪಡುಕೋಣೆ ರಮಾನಂದರಾವ್



ಹರಿಕಮತನು ಕ್ಲಬ್ಬಿಗೆ ಬಾರದೆ ಇದ್ದುದನ್ನು ನೋಡಿ ನನಗೆ ಆಶ್ಚರ್ಯವಾಯಿತು. ಐದುವರೆ ಗಂಟೆ ಆಯಿತು. ಆರು ಆಯಿತು. ಆರುವರೆ ಆಯಿತು. ಆದರೂ ಹರಿಕಮತನು ಇಲ್ಲ! ಅವನಿಲ್ಲದೆ ಬಿಝಿಕ್ ಆಟ ಸಪ್ಪೆ. ಯಾವುದೋ ಒಂದು ಒಳ್ಳೆಯ ಮೇಲೋಗರಕ್ಕೆ ಏನೋ ಒಂದು ಕಡಿಮೆ ಯಾದಂತಾಗುವುದು. ಆದರೂ ಅಭ್ಯಾಸಬಲದಿಂದ ನಾನು ಆಡಲಿಕ್ಕೆ ಕೂತುಕೊಂಡೆನು. ಕ್ಷಣದಲ್ಲಿಯೇ ಆಟವಿದ್ದುದು ಕಾಟವಾಗಿ ಪರಿಣಮಿಸಿತು. ಏಕೆಂದರೆ ಹರಿಕಮತನ ಆ ಕುಚೋದ್ಯದ ಮಾತುಗಳೆಲ್ಲಿ? ಮನೋಹಕರವಾದ ಸಂಗೀತವೆಲ್ಲಿ? ಮಾತುಮಾತಿಗೆ ರಭಸದಿಂದ ಹೊರಡುವ ಆ ಕವಿತೆಯೆಲ್ಲಿ? ಒಂದು ಕೈಯಿಂದ ಇಸ್ಪೀಟು ಎಲೆಗಳನ್ನು ಹಿಡಿದುಕೊಂಡು ಇನ್ನೊಂದು ಕೈಯಿಂದ ಬಿಸ್ಕೂಟು ಆಂಬೋಡೆಯನ್ನು ಬಾಯೊಳಗೆ ತುರಿಕಿಸಿ, ಆ ಕ್ಷಣವೇ ಒಂದು ಸಿಕ್ವೆನ್ಸಿನ ಸ್ಕೋರನ್ನು ಹಾಕಿ ಕೂಡಲೇ ಸಂಗೀತವನ್ನು ಹೊರಡಿಸುವ ಆ ಚಾತುರ್ಯವೆಲ್ಲಿ? ನಿಜವಾಗಿಯೂ ಅವನಿಲ್ಲದೆ ನನಗೆ ಬೇಸರ ಬಂತು. ಹೀಗಾಗಿ ಎದುರು-ಪಾರ್ಟಿಯವರು ತುರುಪಿನ ಮೂರನೆಯ ಸಿಕ್ವೆನ್ಸನ್ನೂ ಐದನೆಯ ಬಿಝಿಕನ್ನೂ ಮೇಜಿನ ಮೇಲೆ ಹಾಕಿದ ಕೂಡಲೇ, ಕೊಠಡಿಯೊಳಗೆ ಆಗ ತಾನೇ ಪ್ರವೇಶಿಸಿದ ಕ್ಲಬ್ಬಿನ ಆಳು ಕಾಶ್ಮೀರನ ತಲೆಯ ಮೇಲೆ ನನ್ನ ಕೈಯಲ್ಲಿದ್ದ ಎಲೆಗಳನ್ನು ಗುರಿ ಇಟ್ಟು ಬಿಸಾಡಿ, ಕುರ್ಚಿಯಿಂದೆದ್ದು ಕ್ಲಬ್ಬಿನ ಹೊರಬಿದ್ದೆನು.

ನಾನು ಕ್ಲಬ್ಬಿನಿಂದ ಇಪ್ಪತ್ತೈದು ಹೆಜ್ಜೆಗಳನ್ನಿಟ್ಟಿದ್ದೆನೋ ಇಲ್ಲವೋ, ಹಿಂದೂಸ್ಥಾನ ಸಿನೇಮಾದವರು ಹಂಪನಕಟ್ಟೆಯಲ್ಲಿ ಇಡುವ ಆ ಜಾಹೀರು-ಹಲಗೆಯ ಹತ್ತಿರ ಹರಿಕಮತನು ನಿಂತಿರುವುದನ್ನು ಕಂಡೆನು. ನಾನು ಹರಿಕಮತನನ್ನು ಕಂಡದ್ದೇನೋ ನಿಜ. ಆದರೆ ಅವನು ನನ್ನನ್ನು ಕಾಣಲಿಲ್ಲ. ನನ್ನನ್ನು ಕಾಣಲು ಅವನಿಗೆ ಸಾಧ್ಯವಿರಲಿಲ್ಲ. ಅವನನ್ನು ಮುತ್ತಿಗೆ ಹಾಕಿ 'ಕೂಲಿ, ಬೇಕೋ, ಸ್ವಾಮಿ! ನಾನು ಬರುತ್ತೇನೆ, ಸ್ವಾಮಿ! ಎಲ್ಲಿಗೆ ಸ್ವಾಮೀ!' ಎಂದು ಅರಚುತ್ತಿದ್ದ ಇಪ್ಪತ್ತೆರಡು ಮಂದಿ ಸಣ್ಣ ಪೋರರನ್ನು ದಿಕ್ಕಾಪಾಲಾಗಿ ಚದರಿಸುವ ಕೆಲಸದಲ್ಲಿ ಅವನು ವಿಶೇಷ 'ಶೋಪಿಂಗ್' ಮಾಡಿದಂತೆ ತೋರಿಬಂತು. ಅವನ ದೇಹವೆಲ್ಲ ಚಿಕ್ಕ ದೊಡ್ಡ ಗಂಟುಗಳಿಂದಲೂ ಕಾಗದದ ಕಟ್ಟುಗಳಿಂದಲೂ ಅಲಂಕರಿಸಲ್ಪಟ್ಟಿತ್ತು. ನಾನು ಹತ್ತಿರ ಹೋಗಿ ಅವನ ಬೆನ್ನನ್ನು



ತಟ್ಟಿ, ಇದೇನು, ಹರಿ, ನೀನಿಂದು ಕ್ಲಬ್ಬಿಗೆ ಬರಲಿಲ್ಲವೇಕೆ?' ಎಂದು ಕೇಳಿದೆನು.

'ಕ್ಲಬ್ಬಿಗೆ ಮಣ್ಣು ಹಾಕ!... ನಾನೊಂದು ಹೇಳುತ್ತೇನೆ. ನೀನು ಕೇಳುವುದು ಒಳ್ಳೇದು. ಇನ್ನು ನಿನಗೆ ನನ್ನ ಬೆನ್ನು ತಟ್ಟಬೇಕೆನಿಸುವಾಗ ಅದು ಕಬ್ಬಿಣದ್ದಲ್ಲವೆಂದು ನೆನಪಿರಲಿ!'

ಇಂದು ಏನೋ ಹರಿಕಮತನ ಬಾಳ್ವೆಯಲ್ಲಿ ಮಸಾಲೆ ಬಂದಿರಬೇಕೆಂದು ಮನಸ್ಸಿನಲ್ಲಿಯೇ ತಿಳಿದುಕೊಂಡೆನು.

'ನಡೆದ ಸಂಗತಿಯೇನು? ಅಥವಾ ನಡೆಯುವ ಸಂಗತಿಯೇನು?' ಎಂದು ಪುನಃ ಪ್ರಶ್ನಿಸಿದೆನು.

'ಕಾಣುವುದಿಲ್ಲವೇ?'

'ಹೌದು, ಕಾಣುತ್ತದೆ. ನೀನಿಂದು ಇಡೀ ತೇರು ಬೀದಿಯನ್ನು ಸುಲಿಗೆ ಮಾಡಿದಂತೆ ತೋರುತ್ತದೆ ಅಲ್ಲವೆ?' ಎಂದೆನು.

'ತೇರು-ಬೀದಿಯಲ್ಲ, ಇಡೀ ಮಂಗಳೂರನ್ನೇ ಸುಲಿಗೆ ಮಾಡಿದರೂ ನಾನೀಗ ಮರೆತು ಹಾಕಿದ ವಸ್ತು ನನ್ನ ಪಾಲಿಗೆ ಬರಲಿಕ್ಕಿಲ್ಲವೆಂದು ನಂಬುತ್ತೇನೆ.'

'ಏನಪ್ಪ ಅದು? ನೀನು ಹಾಗೆ ಮರೆತು ಹಾಕಿದ ವಸ್ತುವಾದರೂ ಏನು?' ಎಂದು ನಾನು ಸಹಜವಾಗಿ ಕೇಳಿದೆನು.

ನನ್ನದು ನಿರಪರಾಧವಾದ ಪ್ರಶ್ನೆ. ನಿಮಗೆ ಗೊತ್ತು. ಆದರೂ ಹರಿಕಮತನು ಅಷ್ಟೇಕೆ ರೇಗಿ ಕೊಂಡನೆಂದು ನನಗೆ ಈಗಲೂ ತಿಳಿಯುವುದಿಲ್ಲ.

ನಾಲ್ಕು ಮಾರ್ಗ ಕೂಡಿದಲ್ಲಿ (ಏಳು ಎಂದು ನಮ್ಮ ನೆನಪು-ಸಂಪಾದಕ 'ಮ.ಗ') ಸುಮ್ಮನೆ ಅವನ ಸಿಟ್ಟಿಗೆ ಈಡಾಗುವುದೇಕೆಂದು ಕೂಡಲೇ ನನ್ನ ಕಾಲಿಗೆ ಬುದ್ಧಿ ಹೇಳಿದೆನು. ಆದರೆ ಹರಿಕಮತನು ಬಿಡಲಿಲ್ಲ. ನನ್ನನ್ನು ಕರೆದನು. ಉಪಾಯವಿಲ್ಲದೆ ನಾನು ಹಿಂತಿರುಗಿದೆನು.

ಹರಿಕಮತನ ಸಿಟ್ಟು ತೀರಾ ಮಾಯವಾಗಿತ್ತು. ಅವನ ಮನಸ್ಸಿನಲ್ಲಿ ಯಾವುದೋ ಒಂದು ತರದ ವ್ಯಾಕುಲತೆ ಹಬ್ಬಿಕೊಂಡಿದ್ದಂತೆ ತೋರಿಬಂತು. ಅವನ ಮುಖ ಬಾಲ ಹೋದ ನರಿಯ ಮುಖದಂತೆ ಬೆಪ್ಪಾಗಿದ್ದಿತು. ನನ್ನ ಗಡುಸಿನ ವರ್ತನೆಗೆ ನಾನೇ ಬೇಸರ ಪಟ್ಟೆನು.

'ನೋಡು, ರಮಾನಂದ,' ಎಂದು ಹರಿಕಮತನು ನನ್ನ ಭುಜದ ಮೇಲೆ ಕೈಯಿಟ್ಟು ಪ್ರಾರಂಭಿಸಿದನು, 'ನಾನೊಂದು ಫಜೀತಿಯಲ್ಲಿ ಬಿದ್ದಿದ್ದೇನೆ. ಇಂದು ಬೆಳಗ್ಗೆ ನಾನು ಕಚೇರಿಗೆ ಹೋಗುವಾಗ್ಗೆ ನನ್ನ ರುಕ್ಮಿಣಿ ಕೆಲವು ಸಾಮಾನುಗಳನ್ನು ಮನೆಗೆ ಬರುವಾಗ ತರಲಿಕ್ಕೆ ಹೇಳಿದ್ದಳು. ಯಾವುದೋ ಒಂದನ್ನು ಮಾತ್ರ, ಎಷ್ಟು ಮಾತ್ರಕ್ಕೂ ಮರೆಯಲಾರದೆಂದು ಅವಳು ಇಪ್ಪತ್ತು ಸಾರಿ ಒತ್ತಿ ಹೇಳಿದ್ದಳು. ಅವಳು ಹಾಗೆ ಒತ್ತಿ ಹೇಳಿದ ವಸ್ತುವನ್ನೇ ಈಗ ಮರೆತಿರುವೆನು. ಮಾಡುವುದೇನು?'

ನನಗೆ ನಗುವನ್ನು ತಡೆಯಲಿಕ್ಕಾಗಲಿಲ್ಲ. 'ಮಾಡುವುದೇನು, ಕ್ಲಬ್ಬಿಗೆ ಹೋಗಿ ಒಂದು ಆಟ ಬಿಝೀಕನ್ನು ಆಡುವುದು. ಬಾ ಹೋಗೋಣ. ಗಂಟೆ ಏಳೂ ಕಾಲು ಆಯಿತಷ್ಟೇ.' ಎಂದೆನು.

'ಛೆ, ಛೆ, ಅದಾಗದು. ಅವಳು ಅಷ್ಟು ಒತ್ತರದಿಂದ ತರಬೇಕೆಂದು ಹೇಳಿದ ವಸ್ತುವನ್ನು ತಾರದೆ ಇದ್ದರೆ.... ತಾರದೆ ಇದ್ದರೆ.....'

'ಮನೆಯಲ್ಲಿ ಅನ್ನ ಸಿಕ್ಕಲಿಲ್ಲವೆಂದು ಹೆದರುತ್ತೀಯೋ? ಹಾಗಾದರೆ ನಮ್ಮಲ್ಲಿಗೆ ಬರಬಹುದಲ್ಲ!'

'ನೋಡು, ಇದು ತಮಾಷೆಯಲ್ಲ. ಆ ವಸ್ತುವನ್ನು ಈಗ ಹೇಗಾದರೂ ಮಾಡಿ ನೆನಪಿಗೆ ತರಬೇಕು. ಇಲ್ಲದಿದ್ದರೆ ನನಗಿಂದು ಮನೆಯಲ್ಲಿ... ಮನೆಯಲ್ಲಿ... ಫಜೀತಿ.....''

'ಫಜೀತಿ ಅಲ್ಲ, ಹುಚ್ಚು, ನನ್ನ ಸುಶಿ ಹೇಳಿದ ಸಂಗತಿಗಳಲ್ಲಿ ನಾನು ಕ್ರಮವಾಗಿ ಶೇಕಡ 99ರಂತೆ ಮರೆತುಬಿಡುತ್ತೇನೆ. ನಾನು ಈವರೆಗೆ ಮರೆತುಬಿಟ್ಟು ಕಳಕೊಂಡ ಕೊಡೆಗಳನ್ನೆಲ್ಲ ಈಗ ಒಟ್ಟು ಕೂಡಿಸಿದರೆ ಒಂದು 'ಆಂಬ್ರೆಲ್ಲಾ ಮಾರ್ಟ'ನ್ನೇ ತೆರೆಯಬಹುದು.'

'ಅದೇನೊ ನನಗೆ ಗೊತ್ತಿಲ್ಲ. ಆ ವಸ್ತುವಿನ ನೆನಪಾಗುವವರೆಗೆ ನಾನು ಇಲ್ಲಿಂದ ಹೋಗುವಂತಿಲ್ಲ. ಇದು ನಿಶ್ಚಯ!'

'ಹಾಗಾದರೆ ನೀನಿಲ್ಲಿಯೇ ಇದ್ದು ಈ ಮಾರ್ಗದಲ್ಲಿ ಚಲಾವಣೆಯಾಗುವ ಮೋಟರ್ ಕಾರುಗಳ ಖಾನೆಶುಮಾರಿಯನ್ನು ತೆಗೆ. ನನಗೆ ಹೊತ್ತಾಗುತ್ತದೆ. ನಾನು ಮನೆಗೆ ಹೋಗುತ್ತೇನೆ.'

'ನಿಲ್ಲು, ರಮಾನಂದ, ನಾನು 'ಬ' ಕಾರದ ಅಕ್ಷರಮಾಲೆಯನ್ನು ಅನೇಕ ಸಾರಿ ಮನಸ್ಸಿನಲ್ಲಿಯೇ ತಿರುಗಿಸಿ ಆಯಿತು....'

'ಏನು? 'ಬ'ಕಾರದ ಅಕ್ಷರಮಾಲೆಯನ್ನು?'

ಹರಿಕಮತನ ಬುದ್ಧಿಸ್ಥಿರತೆಯ ವಿಷಯವಾಗಿ ನನಗೆ ಸ್ವಲ್ಪ ಸಂಶಯ ಉಂಟಾಗಲಿಕ್ಕೆ ಪ್ರಾರಂಭಿಸಿತು.

'ಹೌದು, 'ಬ'ಕಾರದ ಅಕ್ಷರಮಾಲೆಯನ್ನು , ಬ ಬಾ ಬಿ ಬೀ ಬು ಬೂ ಬೆ ಬೇ ಬೈ ಬೊ ಬೋ ಬೌ ..... ಬೌ'

'ಏನು? ಬ ಬಾ ಬಿ ಬೀ ಬು ಬೂ ಬೆ ಬೇ ಬೈ ಬೊ ಬೋ ಬೌ ..... ಬೌ'

ಹೌದು, ಬ ಬಾ ಬಿ ಬೀ ಬು ಬೂ ಬೆ ಬೇ ಬೈ ಬೊ ಬೋ ಬೌ ..... ಬೌ....

ಬೌ.... ಮತ್ತು ಭ ಭಾ ಭಿ ಭೀ ಭು ಭೂ ಭೆ ಭೇ ಭೈ ಭೊ ಭೋ ಭೌ....ಭೌ...

ನನ್ನ ಸಂಶಯ ಬಲವಾಯಿತು. ಹತ್ತಿರವಿದ್ದ ಯಾರೋ ಒಬ್ಬರೂ 'ನಾಯೊ!' ಎಂದರು. ಬೀಟಿನಲ್ಲಿದ್ದ ಪೋಲಿಸಿನವ ನಮ್ಮತ್ತ ಕಡೆಗೆ ದೃಷ್ಟಿಸಿ ನೋಡಿದನು. ಹರಿಕಮತನ ಭುಜದ ಮೇಲೆ ಕನಿಕರದಿಂದ ನನ್ನ ಕೈಯನ್ನಿಟ್ಟು ನಾವು ಗಾರಡಿವಾಣಿಯನ್ನು ನಮ್ಮ ಮನೆಯೊಳಗೇನೇ ಕದವನ್ನು ಭದ್ರವಾಗಿ ಹಾಕಿಕೊಂಡು ಕಲಿಯೋಣ. ಇಲ್ಲಿ ಬೇಡ' ಎಂದು ನಯವಾಗಿ ಹೇಳಿದೆನು.

'ಎಂತಹ ದಪ್ಪ ತಲೆ ನಿನ್ನದು, ರಮಾನಂದ! ನನಗೇನೂ ಹುಚ್ಚು ಗಿಚ್ಚು ತಗಲಿಲ್ಲ! ನನ್ನಾಕೆ ನಾನು ಮರೆಯಬಾರದೆಂದು ಹೇಳಿದ ಸಂಗತಿಯೋ ವಸ್ತುವೋ 'ಬ' ಮಾಲೆಯ ಅನೇಕ ಅಕ್ಷರಗಳಿಂದ ಕೂಡಿತ್ತು. ಅಂತಹ ಅಕ್ಷರದಿಂದ ಪ್ರಾರಂಭಿಸುವ ಶಬ್ದಗಳೇ ಅವುಗಳಾಗಿರಬೇಕೆಂದು ನನ್ನ ನೆನಪು.'



'ಅಷ್ಟೇ ತಾನೇ? ಕ್ಲಬ್ಬಿಗೆ ಹೋಗೋಣ. ಅಲ್ಲಿ ಕಿಟ್ಟೆಲ್ ಸಾಹೇಬರ 'ಡಿಕ್ಷನರಿ ಇರಬಹುದು'

'ಡಿಕ್ಷನರಿಯೂ ಬೇಡ, ಮೀಸೆ-ನರಿಯೂ ಬೇಡ. ನೀನು ಇಲ್ಲಿದ್ದಾಗಲೇ 'ಬ' ಮಾಲೆಯ ಅಕ್ಷರಗಳಿಂದ ಶುರು ಆಗುವ ಕೆಲವು ಶಬ್ದಗಳನ್ನು ಹೇಳಬಾರದೇ?

'ಹಾಗೆ ಹೇಳಲಿಕ್ಕೆ ನಾನೊಬ್ಬ ಪಂಡಿತನೆಂದು ನೀನು ಭಾವಿಸಿದ್ದೀ ಎಂದು ಕಾಣುತ್ತೆ' ಎಂದೆನು.

'ನನ್ನ ರುಕ್ಮಿಣಿ ಪಂಡಿತೆಯೇ? ಅವಳು ಹೇಳಿದ ಶಬ್ದಗಳು ಯಾವುವೆಂದು ಆಲೋಚಿಸಲಿಕ್ಕೆ ಪಂಡಿತನಾಗಬೇಕೆ? ನೋಡೋಣ, ಕೆಲವು ಶಬ್ದಗಳನ್ನು ಹೇಳಿಬಿಡು. ಫಕ್ಕನೆ ಅವಳು ಹೇಳಿದ ವಸ್ತುವಿನ ನೆನಪಾದೀತು.'

'ಇದು ಬರೇ ಹುಚ್ಚು. ಆದರೂ ಪ್ರಯತ್ನಿಸುತ್ತೇನೆ.'

'ಹೂಂ'

'ಬದನೆ, ಬೆಲ್ಲ, ಬೇವು.....'

'ಅಲ್ಲ'

'ಬಟಾಟೆ, ಬಾಟ್ಲಿ, ಬೂಚು, ಬೆಂಕಿಪೆಟ್ಟಿಗೆ, ಬುರುಡೆ....'

'ಅಲ್ಲ'

'ಬದಾಮು, ಮುಲಾಮು, ಸಲಾಮು.....'

'ಪ್ರಾಸು ಇದ್ದ ಶಬ್ದಗಳಲ್ಲ. 'ಬ' ಕಾರದಿಂದ ಶುರು ಆಗುವ ಶಬ್ದಗಳು.'

'ಓಹೊ, ಮರೆತೆ.... ಬದಾಮಹಲ್ವಾ, ಮೈಸೂರಪಾಕ್-ತಪ್ಪಿ ಬಿದ್ದೆ - ಬದನೆಕಾಯಿ, ಬಾಳೆಹಣ್ಣು, ಬಾಳೆ-ಎಲೆ.....'

'ಅಲ್ಲ'

'ಬ್ರೆಡ್ಡು, ಬಿಸ್ಕೂಟು, ಭಾಜಿ, ಬೇರು, ಬೆಂಡೆಕಾಯಿ.... ಇನ್ನೇನಪ್ಪಾ.....'

'ಹೂಂ, ಆಲೋಚಿಸು.'

'ಬೀಗ, ಬೀಜಾಗರ, ಬೂಕು, ಬಿಲ್ವ, ಬೆಣ್ಣೆ....'

ಅಲ್ಲ'

'ಬಂಗಾರ, ಬೆಳ್ಳಿ, ಬಳೆ, ಬಂಗಾರದ ಬಳೆ, ಬಟ್ಟಲು, ಬೆಳ್ಳಿಬಟ್ಟಲು, ಬಾರ್ಲಿ....'

'ಅಲ್ಲ'

'ಬಿಸಿಲು, ಬಿದಿರು, ಭಂಗಿ, ಭ್ರಾಂತಿ....'

'ತಡೆ, ತಡೆ, ತಡೆ! ಸ್ವಲ್ಪ ಆಲೋಚಿಸಿ ಹೇಳಬಾರದೇ?

'ನನ್ನ ತಪ್ಪಲ್ಲ. ನನ್ನ ಶಬ್ದಭಂಡಾರ ಬರಿದಾಗುತ್ತ ಬರುತ್ತದೆ.'

'ಇರಲಿ, ಸ್ವಲ್ಪ ಪ್ರಯತ್ನ ಮಾಡು.'

'ಬೆತ್ತ ಬಾಚಣಿಗೆ....'

'ಭೇಷ್!'

'ಏನು, ನೆನಪಾಯಿತೇ?

'ಅಲ್ಲ, ನಿನಗೆ ಸ್ವಲ್ಪ ವಿಚಾರ ಬಂದುದಕ್ಕೆ ಭೇಷ್ ಅಂದೆ, ಮುಂದರಿಸು!'

'ಬದುಕು, ಭೂಮಿ, ಬೈಲು, ಬಿರುದು, ಬೆರಳು, ಬೆವರು.....

'ಛೆ! ಛೆ!'

'ಬೋನು, ಬಟ್ಟೆ, ಬೇಲಿ, ಭೂತ, ಭ್ರಮೆ, ಬಾಧೆ, ಬೆರಗು....'

'ನಿಲ್ಲು, ನಿಲ್ಲು! ಸುಮ್ಮನೆ ಕಂಡಾಬಟ್ಟೆ ಶಬ್ದಗಳನ್ನು ಬೊಗಳಬೇಡ.'

'ಮತ್ತೇನು ಮಾಡುವುದು? ನೆನಪಿಗೆ ಬಂದ ಶಬ್ದಗಳನ್ನೆಲ್ಲ ಹೇಳುವ ಕೆಲವನ್ನು ನಾನು ಮಾಡುತ್ತೇನೆ. ಅವುಗಳನ್ನು ಹೆಕ್ಕಿ ತೆಗೆಯುವ ಕೆಲಸವು ನಿನ್ನದು.

'ಆಗಲಿ, ಬೇರೆ ಉಪಾಯವಿಲ್ಲ.'

'ಹಾಗಾದರೆ ಕೇಳು, ಬೀಡು, ಬಿರಿ, ಬದಲಿ, ಬಾವಲಿ, ಬೊಂಬೆ, ಬೈಗಳು....

'ಪ್ರಾರಂಭಿಸಬೇಕೆಂದು ಕಾಣುತ್ತದೆ!'

'ಬ್ರೆಡ್ಡು, ಬ್ರೋಚು, ಬ್ರಶ್ಯು ಬಟನ್ಸು.... ಭಸ್ಮ, ಬೂದಿ, ಬಡಾಯಿ, ಬೀಡಿ ಬ್ರೆಂದಿ, ಬೊಬ್ಬೆ....'

ಅಬದ್ಧ!'

'ಬಯಕೆ, ಬಯಕೆ-ಕೂಳು, ಬಿಲ್ಲು, ಬಾಣ, ಭಾಷಣ, ಭಾಗ್ಯ, ಬೈರಾಗಿ, ಭಾದ್ರಪದ.....'

'ಹುಚ್ಚು!'

'ಬೂಟ್ಸೂ, ಬ್ಲಾಟೆಂಗು, ಬ್ಯೆಂಡು ಬ್ಯಾಂಕು, ಬೋನಸ್ಸು, ಬಿಝೀಕು..... ಬೈಬಲ್ಲು, ಬೋಲ್ಟು, ಬಾಂಡು, ಬಾಂಬು, ಬೋರ್ಡು, ಬಾಯ್ಲರು.'

'ಅಲ್ಲ, ಅಲ್ಲ, ಅಲ್ಲ!'

'ಬೆರೊಮೀಟರು, ಥರ್ಮೋಮೀಟರು-ಪುನಃ



ತಪ್ಪಿ ಬಿದ್ದೆ. ಆಲೋಚಿಸುತ್ತೇನೆ. ಸ್ವಲ್ಪ ತಾಳು, ಬ್ರೆಡ್ಡು, ಬಿಸ್ಕೂಟು.....'

'ಅದೊಮ್ಮೆ ಆಗಿದೆ'

'ಬಿಸ್ಕೂಟು ಒಮ್ಮೆ ಆದರೆ, ಇಗೊ, ಬಿಸ್ಕೂಟು ರೊಟ್ಟಿ, ಬಿಸ್ಕೂಟು ಆಂಬೊಡೆ, ಬೋಂಡಾ ಆಗಲಿಲ್ಲ.'

'ಅದಲ್ಲ'

'ಹಾಗಾದರೆ, ಬಂಡಿ, ಬಾಡಿಗೆ, ಬಲೆ, ಬಂಡೆಕಲ್ಲು, ಬೇಸಾಯ, ಬೇಸರ....'

ಬರಲಿಕ್ಕೆ ಪ್ರಾರಂಭವಾಯಿತು. ಆದರೂ..... ಹೂಂ, ಮುಂದರಿಸು.'

'ಬಾಸ್ಕೇಟು, ಬೆಳಕು, ಬೆಳೆ, ಬೊಗರಿ, ಬಿಗೀಲು, ಬ್ಯಾಟು, ಬೇಟೆ ನಾಯಿ, ಬೆಕ್ಕು, ಬಾತುಕೋಳಿ, ಬೆಕ್ಕಿನ ಬರಿ.... ಬಂದರು, ಬಂಧು ಬಾತ್ಮಿಛೆ, ಛೆ, ಆದಲ್ಲ. ಬೀಗರು, ಭೇರಿ, ಬೆಟ್ಟ, ಬೀಸೋಕಲ್ಲು-ಏನು, ಇನ್ನೂ ನೆನಪಾಗಲಿಲ್ಲವೇ? ಹೋಗಲಿ ಬಾಗೇ ಸರಿ. ಬಿಲಹರಿ, ಬೇಹಾಗ-ತಪ್ಪಾಯಿತು, ಕ್ಷಮಿಸು-ಬಸ್ಸು ಬೆಂಚು, ಬೋಟಾರು, ಬೇಜು, ಬಂಚ, ಬೆನ್ಸಿಲು, ಬೇಣ, ಬೇಣದ ಬತ್ತಿ....'

'ಏನು ಏನು? ಗ್ರೀಕ್ ಭಾಷೆಯ ಶಬ್ದಗಳೋ?

'ನನಗೆ ಗೊತ್ತಿಲ್ಲ. ಇಲ್ಲಿ ತಂಗಾಳಿಗೆ ನಿಂತು ಮೂಗು ಕಟ್ಟಿಹೋಗಿದೆ. ನಾಲಿಗೆ ದಣಿದು ಸರಿಯಾಗಿ ತಿರುಗುವುದೇ ಇಲ್ಲ. ಇಷ್ಟು ರಾಶಿ ಶಬ್ದಗಳನ್ನು ಹೇಳಿದರೂ ನಿನಗೆ ನೆನಪಾಗಲಿಲ್ಲವೆ? ನೀನು ಬೇಕಾದದ್ದನ್ನು ಮಾಡು. ನನಗೆ ಬೇಸರ ಬಂತು. ಸಾಕಷ್ಟು ಹುಚ್ಚನಾಗಿ ವರ್ತಿಸಿದೆ. ಇನ್ನು ಹೆಚ್ಚು ಬೇಡ. ಹೊತ್ತಾಯಿತು. ನಾನಿನ್ನು ಹೋಗುತ್ತೇನೆ' ಎಂದು ಹೇಳಿ ಮನೆಗೆಂದು ಹೋಗಲಿಕ್ಕೆ ಹೆಜ್ಜೆಯಿಟ್ಟೆನು.

ಆದರೆ ಹರಿಕಮತನು ಪುನಃ ಬಿಡಲಿಲ್ಲ. ಹೋಗಲಿಕ್ಕೆ ಸಿದ್ಧನಾದ ನನ್ನನ್ನು ಎಳೆದನು. ನಾನು ಅವನಿಂದ ಬಿಡಿಸಿಕೊಳ್ಳಲಿಕ್ಕೆ ಪ್ರಯತ್ನಿಸಿದೆನು. ನಮ್ಮ ಹೋರಾಟದಲ್ಲಿ ನನ್ನ ಕಾಲು ಹಿಂದೂಸ್ಥಾನ ಸಿನೇಮಾದವರ ಜಾಹೀರು ಹಲಗೆಗೆ ತಾಗಿ ಹಲಗೆ ಧೊಪ್ಪನೆ ಕೆಳಗೆ ಬಿತ್ತು. ಹರಿಕಮತನೂ ನನ್ನ ಕೈಯನ್ನು ಬಿಟ್ಟನು. ನಾನು ಬಗ್ಗಿ ಹಲಗೆಯನ್ನು ಸರಿಯಾಗಿ ಇಡುವಾಗ ಅದರಲ್ಲಿ ಬರೆದಿದ್ದುದನ್ನು ನೋಡಿದೆನು. 'ಬಣ್ಣದ ಬೀಸಣಿಗೆ!' ಎಂದು ಗಟ್ಟಿಯಾಗಿ ಓದಿದೆನು.

ಇದನ್ನು ಕೇಳುತ್ತಲೇ ಹರಿಕಮತನು ಒಂದು ದೊಡ್ಡ ಅರಚನ್ನು ಹಾಕಿದನು.

'ಇಂದೇನು ನಿನಗೆ ಹಿಡಿದ ಹುಚ್ಚು?' ಎಂದು ಕೇಳಿದೆನು.

'ಹೌದು ಹುಚ್ಚು, ರುಕ್ಮಿಣಿ ಹೇಳಿದ ವಿಷಯ ಈಗ ನನ್ನ ನೆನಪಾಗಿ ಬಂತು 'ಬಣ್ಣದ ಬೀಸಣಿಗೆ!'

'ಏನು, ಬಣ್ಣದ ಬೀಸಣಿಗೆಯನ್ನು ತರಬೇಕೆಂದು ಹೇಳಿದ್ದಳೇ? ಎಂದು ಕೇಳಿದೆನು.

'ಅಲ್ಲಪ್ಪ! ಇಂದು 'ಹಿಂದುಸ್ತಾನ ಸಿನೇಮ' ಮಂದಿರದಲ್ಲಿ 'ಬಣ್ಣದ ಬೀಸಣಿಗೆ' ಎಂಬ ಫಿಲ್ಮಿನ ಕಡೆಯ ದಿನವಂತೆ. ಅದನ್ನು ನೋಡಲಿಕ್ಕೆ ಹೋಗಬೇಕೆಂದು ರುಕ್ಮಿಣಿ ಒತ್ತಾಯಪಡಿಸಿದ್ದಳು. ಆದುದರಿಂದಲೇ ಇಂದು ಬೇಗ ಮನೆಗೆ ಬರಲಿಕ್ಕೆ ಮರೆಯಬಾರದೆಂದು ಹೇಳಿದ್ದಳು..... ಈಗ ಮಾತಾಡಿ ಪ್ರಯೋಜನವೇನು? ನಾನು ಹುಚ್ಚನಂತೆ ಸುಮ್ಮನೆ ನಿನ್ನ ಹಾಳುಹರಟೆಯನ್ನು ಕೇಳುವುದರಲ್ಲೇ ಸಮಯ ಕಳೆದೆನು.!.....

ಇದು ನನ್ನ ಜೀವಿತದ ಹಣೆಬರಹ. ಏನು ಮಾಡಲಿಕ್ಕಾದೀತು? ಕೃತಜ್ಞತೆ ಎಂದರೇನೆಂದು ನಾನು ಸಹಾಯ ಮಾಡಿದವಗೆ ಸಾಧಾರಣವಾಗಿ ಗೊತ್ತೇ ಇರುವುದಿಲ್ಲ. ಅವರಿಗೆ ಗೊತ್ತಿರುವುದು ಕೃತಘ್ನತೆಯೊಂದೇ.

ಹರಿಕಮತನು ತನ್ನ ವಾಚನ್ನು ಹೊರತೆಗೆದು ಸಮಯವನ್ನು ನೋಡಿದನು. ಎಂಟು ಗಂಟೆಯಾಗಿ ಐದು ಮಿನಿಟುಗಳಾದವೆಂದು ಕ್ಷೀಣ ಸ್ವರದಿಂದ ಹೇಳಿದನು. ಹಿಂದೂಸ್ಥಾನ ಸಿನೇಮಾದಲ್ಲಿ 'ಬಣ್ಣದ ಬೀಸಣಿಗೆ'ಯ ಕೊನೆಯ ಪ್ರದರ್ಶನ ಪ್ರಾರಂಭ ವಾಗಿ 35 ಮಿನಿಟುಗಳಾಗಿದ್ದವು.

●

---

**ವಿಶಿಷ್ಟ ನವಿರುತನದ ಬರವಣಿಗೆಯಿಂದ ಗಮನ ಸೆಳೆದವರಾಗಿದ್ದರು ಪಡುಕೋಣೆ ರಮಾನಂದರಾವ್. ಈ ಲೇಖಕರ- 1938ರಲ್ಲಿ ಪ್ರಕಟವಾಗಿದ್ದ ಪುಸ್ತಕದಿಂದ ಈ ಬರಹ ಆರಿಸಿಕೊಳ್ಳಲಾಗಿದೆ.**

# ಹಾಲ್ದೆನೆಯ ಕನಸು

ಗದ್ದೆ ಹಾಳಿಯ ಮೇಲೆ ನಿಲ್ಲಿಸಿದ್ದ ಬೆಚ್ಚಿನ ಮೇಲೆ ಸಾಲು ಸಾಲು ಗುಬ್ಬಕ್ಕಿ ಕುಳಿತಿವೆ- ಎಳೆ ಹೊಡೆಯಲ್ಲಿ ಕಟ್ಟಿಕೊಳ್ಳುವ ಹಾಲ್ದೆನೆಗಳ ಧ್ಯಾನಿಸುತ್ತಾ...! ಹಾಳಿಯ ಅಡಿಯಲ್ಲಿ ಬಿಲಕೊರೆದು ಬೆಚ್ಚನೆ ಕುಳಿತಿರುವ ಇಲಿಗಳೆಲ್ಲಾ ದಿನದಿಂದ ದಿನಕ್ಕೆ ಗಟ್ಟಿಗೊಳ್ಳುವ ತೆನೆಗಳೆಲ್ಲಾ ನೆಲ ಕಡೆ ಮುಖಮಾಡುವುದನ್ನೇ ಕನಸುತ್ತಿವೆ...!!

# ಮಿಂಚು ಹುಳು

ಹುಣ್ಣಿಮೆಯಿರುಳು ಆಗಸದಲ್ಲಿ ಚಂದ್ರ ಸಾಗುವಾಗ ಉದುರಿಬಿದ್ದ ಬೆವರ ಹನಿಗಳೆಲ್ಲಾ
ಇಳೆಯಲ್ಲಿ ಮಿಂಚುಹುಳುಗಳಾಗಿವೆ!

**ಬಾಲಕೃಷ್ಣ ದೇವನಮನೆ, ಬೆಳಂಬಾರ**

# ಹುಡುಗಿ

ಹುಡುಗಿಯ ನಗು
ಮುಖವ ಕಂಡು
ಗೆಲುವಾಯಿತು ನನಗೆ
ಅಮ್ಮನೆ ಬಂದ ಹಾಗೆ

**ರವಿಶಂಕರ್ ಒಡ್ಡಂಬೆಟ್ಟು, ಬಂಟ್ವಾಳ**



# ವ್ಯಕ್ತ

ಎಲ್ಲವನ್ನೂ ಮೀರುವ ಬಗೆ
ಹೇಗೆ? - ಎಂದು ತಡವರಿಸುವಾಗ,
ಗುಬ್ಬಿಯ ಕೊಕ್ಕಿನಲ್ಲಿದ್ದ ಬೀಜ
ನೆಲಕ್ಕೆ
ಬಿದ್ದು
ಮೊಳೆತು ಮೇಲೆದ್ದಿತು.

**ಎ. ನವೀನ್‌ಕುಮಾರ್, ಚನ್ನಗಿರಿ**

# ಕೊಯ್ಲು

ಬದುಕೇ ಒಂದು ಸ್ಪರ್ಧೆಯಾದಾಗ ಭಾವನೆಗಳೆಲ್ಲಿ? ಕೈಯಿಂದ ಬರೆಯುವುದು ಮರೆಯಾಗುತ್ತಿರುವ ಈ ದಿನಗಳಲ್ಲಿ ಮತ್ತೆ ಭಾವನೆ ಮತ್ತು ಲೆಕ್ಕಣಿಗೆಯ ಮಹತ್ವವನ್ನು ನೆನಪಿಸುತ್ತಿದ್ದೀರಿ. ಬರವಣಿಗೆಯ ವಿಸ್ಮಯದಲ್ಲಿ ನಂಬಿಕೆ ಇರುವ ನಮ್ಮಂಥವರಿಗೆ ನಿಮ್ಮ ಭಾವ ತೀರದ ಬೆರಗು 'ಹಂಗಾಮ' ಆಪ್ಯಾಯಮಾನ.

**ಪೋಶೆಟ್ಟಿಹಳ್ಳಿ ಗುರುರಾಜ್**, ಬೆಂಗಳೂರು

ಕಳೆದ ಸಂಚಿಕೆಯ 'ಉಲ್ಲೇಖ'ದಲ್ಲಿ ಯುವ ಕವಯತ್ರಿಯರ ಕುರಿತ ಲೇಖನ ಓದಿದೆ. ಸ್ವತಃ ಕವಿಯತ್ರಿಯಾಗಿರುವ ಎಂ. ಆರ್. ಭಗವತಿ ಕನ್ನಡದ ಭರವಸೆಯ ಯುವ ಕವಿಯತ್ರಿಯರ ಹೆಜ್ಜೆ ಗುರುತುಗಳು, ದಾಪುಗಾಲುಗಳ ಬಗ್ಗೆ ಕರಾರುವಕ್ಕಾಗಿಯೇ ಬರೆದಿದ್ದಾರೆ. ಮಹಿಳಾ ಕಾವ್ಯದ ದಿಕ್ಕುಗಳ ಶಕ್ತತೆಯನ್ನು ಒರೆಗೆ ಹಚ್ಚುವ, ಅದನ್ನು ಬಗೆಗಣ್ಣಿನಿಂದ ನೋಡುವ ಪ್ರಯತ್ನ ಸಾರ್ಥಕ.

ಒಂದು ಕೊರತೆ : ಎರಡು ಕವನಸಂಕಲನ ತಂದಿರುವ ಕನ್ನಡದ ಕ್ರಿಯಾಶೀಲ ಕವಿಯತ್ರಿ ಆಗಬಲ್ಲ ಪಿ. ಚಂದ್ರಿಕಾ ಹಾಗೂ ಕೆ. ಷರೀಫಾರ ಕುರಿತು ಒಂದು ಮಾತೂ ಹೇಳದಿರುವುದು ಬರಹಕ್ಕೆ ಪೂರ್ಣತೆ ತಂದಿಲ್ಲ. ಅದು ಉದ್ದೇಶಪೂರ್ವಕವಾಗಿರದಿದ್ದರೆ ಕ್ಷಮಾರ್ಹವೆ.

**ವೈಗ, ಶಿವಮೊಗ್ಗ**

ಪತ್ರಿಕೆಗಳ ಮಹಾಪೂರವೇ ಹರಿದಿರುವ ಕನ್ನಡ ಪ್ರಕಾಶನ ಮತ್ತು ಪತ್ರಿಕೋದ್ಯಮ ಕ್ಷೇತ್ರದ ಹೊಸ ಸವಾಲುಗಳನ್ನು ಎದುರಿಸುವ ಸಲುವಾಗಿ ಹೊರಟಿರುವ ನಿಮ್ಮ ಪತ್ರಿಕೆ ದೀರ್ಘ ಕಾಲ ಬಾಳಿ ಎಲ್ಲ ಯಶ ಪಡೆಯಲಿ ಎಂಬ ಹಾರೈಕೆ ನನ್ನದು. ಯಾವುದೋ ಕ್ಷುಲ್ಲಕವಾದರೂ ತಲೆನೋವಿನ ಕಾರಣಗಳಿಗಾಗಿ ಗುಣಮಟ್ಟದಲ್ಲಿ ಹೊಂದಾಣಿಕೆ ಮಾಡಿಕೊಳ್ಳಬೇಕಾದ ದುಃಸ್ಥಿತಿ ನಿಮಗೆ ಎಂದೆಂದಿಗೂ ಬಾರದಿರಲಿ.

**ನಯನಾ ಕಾಶ್ಯಪ್**, ಮಡಿಕೇರಿ

ನಿಜಕ್ಕೂ ಅನನ್ಯತೆಯ ತುಡಿತ, ಅಭಿವ್ಯಕ್ತಿಯಲ್ಲಿನ ಉತ್ಸುಕತೆ 'ಹಂಗಾಮ'ದಿಂದ ಮಾತ್ರ ಸಾಧ್ಯ. ಹೊಸ ಹೊಸ ಬಗೆಯ ಆಶಯ ಹೊಂದಿರುವ ಹಾಗೂ ಉದಯೋನ್ಮುಖ ಬರಹಗಾರರ ಚಿಂತನಶೀಲತೆಗೆ ಹೆಚ್ಚು ಅವಕಾಶ ಒದಗಿಸುತ್ತಿರುವ ನಿಮ್ಮ ಕೆಲಸ ಅಭಿನಂದನಾರ್ಹ.

**ಎಚ್. ಆರ್. ತಿಪ್ಪೇಸ್ವಾಮಿ**, ಹಿರೇಕೋಗಲೂರು

ಮುದ್ದುಮುದ್ದಾದ 'ಹಂಗಾಮ'ದ ಪ್ರತಿ ಸಂಚಿಕೆಗಳೂ ಬೆರಗು ಹುಟ್ಟಿಸುತ್ತವೆ. ಇಂಥದೊಂದು 'ಭಾವ ತೀರದ ಬೆರಗು' ಅಂಚೆಯಣ್ಣನ ಮೂಲಕ ನಮ್ಮ ಮನೆಗಳೊಳಗೆ ಹೆಜ್ಜೆಯಿಡುತ್ತಿರುವುದು ನಿಜಕ್ಕೂ ಸಂತಸದ ವಿಚಾರ.



**ರಾಂ ಕೊಪ್ಪಲು, ತೀರ್ಥಹಳ್ಳಿ**

ಇಂದಿನ ಯುವಕರಿಗೆ ಜೀವಪರವಾದ ಭಾವನೆಗಳ ಧ್ವನಿಯನ್ನು ಕೇಳಿಸಬಲ್ಲಂಥ ಪತ್ರಿಕೆಯಾಗಿದೆ 'ಹಂಗಾಮ'. ನಿಜವಾಗಿಯೂ ಯಾವುದು ಸ್ವೀಕಾರಾರ್ಹ ಎಂಬುದನ್ನು ತನ್ನ ಗುಣಗಳಿಂದಲೇ 'ಹಂಗಾಮ' ಹೇಳುತ್ತದೆ. ನಿಮ್ಮ ಪರಿಶ್ರಮಕ್ಕಾಗಿ ಕೃತಜ್ಞತೆಗಳು.

**ಸುಭಾಷ್ ಚವ್ಹಾಣ**, ಸವಣೂರು

'ಹಂಗಾಮ' ನಿಜಕ್ಕೂ ಆಕರ್ಷಕ ಹಾಗೂ ಓದಲರ್ಹ ಪಾಕ್ಷಿಕವಾಗಿದೆ. ಬರಹಗಳಲ್ಲೆಲ್ಲ ಹೊಸತನವಿದೆ. ಒಂದು ಉತ್ತಮ ಪತ್ರಿಕೆಗಾಗಿ ಶ್ರಮಿಸುತ್ತಿರುವ ನಿಮ್ಮನ್ನು ಅಭಿನಂದಿಸದೆ ಇರಲಾದೀತೇ?

**ವನಿತಾ ಅಂಬುತೀರ್ಥ**, ಬೆಂಗಳೂರು

'ಹಂಗಾಮ' ಓದಿಸಿಕೊಳ್ಳುವ ಗುಣ ಹೊಂದಿದೆ. ರಿಲ್ಕ್ ಪದ್ಯಗಳು ಇಷ್ಟವಾದವು. ಟೂರಿಂಗ್ ಟಾಕೀಸ್‌ನಲ್ಲಿ 'ಸೈಕ್ಲಿಸ್ಟ್' ಚಲನಚಿತ್ರದ ಅರ್ಥ ನನ್ನೊಳಗಿಳಿದು ಕಾಡಿದೆ. ಈ ಕಾಡುವಿಕೆಯ ಅನುರಣನವೇ ಒಂದು ಒಳ್ಳೆಯ ಪತ್ರಿಕೆ ಮಾಡುವ ಕೆಲಸ ಎಂದೆನ್ನಿಸಿದೆ.

**ಜಿ. ಸಿ. ರವಿಚಂದರ್**, ತುಮಕೂರು

# ಮೂರು ಲಘು ಕಥೆಗಳು

❑ ಮಮತಾ

ದೇವಸ್ಥಾನಕ್ಕೆ ಹೋಗಲು ಪತ್ನಿ ತಯಾರಾಗುತ್ತಿದ್ದಳು. ಗಂಡ ಇನ್ನೂ ಮರಳಿರಲಿಲ್ಲ. ಆಕಸ್ಮಿಕವಾಗಿ ಆ ಊರಿನಲ್ಲಿ ಕೋಮುಗಲಭೆ ಪ್ರಾರಂಭವಾಯ್ತು. ಇದರ ಕಾರಣಗಳು ಯಾವ ಯಾವ ದೇವರಿಗಾಗಿ ಗಲಾಟೆ ನಡೆದಿರುತ್ತದೆಯೋ ಅವರಿಗೂ ಕನ್‌ವಿನ್ಸಿಂಗ್ ಅಂತ ಅನಿಸಿರುವುದಿಲ್ಲ ಇರಲಿ... ಮರುದಿನ ಅವಳು ಪೊಲೀಸ್ ಸ್ಟೇಷನ್‌ಗೆ ಹೋಗಬೇಕಾಯ್ತು. ಬಹಳಷ್ಟು ಹೆಣಗಳಲ್ಲಿ ಒಂದನ್ನು ಅವಳು ಹುಡುಕಿಕೊಳ್ಳಬೇಕಿತ್ತು. ಅದು ಅವಳಿಗೆ ಸಿಕ್ಕಿತು. ಆದರೆ ಅದನ್ನು ತೀರಾ ಹತ್ತಿರದಿಂದ ಗಮನಿಸಿದಾಗಲೂ ಅವಳು ಅಸಂಗತವಾಗಿ ಏನೇನೋ ಮಾತನಾಡುತ್ತಲೇ ಇದ್ದಳು. ಅಳುತ್ತಿರಲಿಲ್ಲ. ಸ್ವಲ್ಪ ಹೊತ್ತಿನ ನಂತರ ಅವಳು ಅಲ್ಲಿ ಕರ್ತವ್ಯದ ಮೇಲೆ ಕುಳಿತಿದ್ದವನ ಬಳಿ ಹೇಳಿದಳು:

''ನಾನಿದನ್ನು ನನ್ನ ಗಂಡನ ಹೆಣವೆಂದು ಒಪ್ಪುವುದಿಲ್ಲ. ನಿಮಗೇಕೆ ಅರ್ಥವಾಗುವುದಿಲ್ಲ. ಧರ್ಮಕ್ಕಾಗಿ ಪ್ರಾಣ ಬಿಡುವ ಅಥವಾ ಅರ್ಪಿಸುವಷ್ಟು ನನ್ನ ಗಂಡ ಧಾರ್ಮಿಕನಾಗಿರಲಿಲ್ಲ.''

''ನಮಗೆ ಗೊತ್ತು ಮೇಡಮ್, ನಿಜವಾಗಿಯೂ ಧಾರ್ಮಿಕರಾಗಿರುವವರೆಲ್ಲ ಧರ್ಮಕ್ಕಾಗಿ ಪ್ರಾಣ ಬಿಡುವವರೆಲ್ಲ ಮನೆಯಲ್ಲಿ ಸುರಕ್ಷಿತವಾಗಿದ್ದಾರೆ. ಅವರ ಮೈಮೇಲೆ ಒಂದು ತರಚು ಗಾಯವೂ ಇಲ್ಲ. ಆದರೆ ಅವರು ಜೀವಂತವಾಗಿರುವುದರ ಬಗ್ಗೆ ನಮಗ್ಯಾರೂ ಕಂಪ್ಲೇಂಟ್ ಕೊಟ್ಟಿಲ್ಲ.''



ಒಬ್ಬ ಮಹಿಳೆ ಅಂತಾರಾಷ್ಟ್ರೀಯ ಖ್ಯಾತಿಯ ಚಿತ್ರಕಾರನ ಪೇಂಟಿಂಗ್ಸ್ ವೀಕ್ಷಿಸುತ್ತಿದ್ದಳು. ತನ್ನ ಮನೆಯ ಗೋಡೆಯ ಬಣ್ಣಕ್ಕೆ ಸೂಟ್ ಆಗುವಂತಹದೊಂದನ್ನು ಖರೀದಿಸಿದರಾಯಿತು ಎಂದು ಯೋಚಿಸಿದ್ದಳು. ಆದರೂ ಅವುಗಳನ್ನು ತಿಳಿದುಕೊಳ್ಳಬೇಕೆಂದು ಅವಳಿಗನಿಸಿತು. ಅಲ್ಲೇ ಇದ್ದ ಒಬ್ಬ ಯುವಕನ ಹತ್ತಿರ ಅದರ ಅರ್ಥ ಕೇಳಿದಳು.

''ಮೇಡಮ್ ಇದರಲ್ಲಿ ನೋವಿದೆ.''

''ನೋಡುತ್ತಿದ್ದರೂ ನನಗೆ ಅರ್ಥವಾಗುತ್ತಿಲ್ಲವಲ್ಲ.''

''ನಿಮ್ಮೊಂದಿಗೆ ಇದೇ ಸಮಸ್ಯೆ ಮೇಡಮ್, ನೋಡಿದ್ದು ನಿಮಗೆ ಅರ್ಥವಾಗುವುದಿಲ್ಲ. ಅರ್ಥವಾಗುವಂತಹ ನೋವನ್ನು ನೀವು ನೋಡುವುದೇ ಇಲ್ಲ. ಕಾರಿನ ಗ್ಲಾಸನ್ನು ಮೇಲೇರಿಸಿಬಿಡುತ್ತೀರಿ.''



ಆತ್ಮಹತ್ಯೆ ಮಾಡಿಕೊಳ್ಳುವ ಸಂದರ್ಭದಲ್ಲಿ ಒಬ್ಬ ಸಿಕ್ಕಿಬಿದ್ದಿದ್ದ. ಅದೆಷ್ಟು ಗಂಭೀರ ಅಪರಾಧ ಎಂಬುದರ ಕಲ್ಪನೆಯಾದರೂ ಅವನನ್ನು ನ್ಯಾಯಾಧೀಶರ ಎದುರು ತಂದು ನಿಲ್ಲಿಸಿದಾಗಲೂ ಇರಲಿಲ್ಲ. ಆತುರಾತುರದಿಂದ ಅವನು ಸಾಯಲು ತನಗಿದ್ದ ಎಲ್ಲ ಕಾರಣಗಳನ್ನು ವಿವರಿಸಿದ. ಕರುಣೆಗಾಗಿ ಕಾದ ಅವನಿಗೆ ತನ್ನ ಕಾರಣಗಳ ಮೇಲೆ ಅಷ್ಟು ನಂಬಿಕೆಯಿತ್ತು. ಕಾರಣಗಳನ್ನು ಕೇಳಿಮುಗಿಸಿದ ನ್ಯಾಯಾಧೀಶ,

''ಇನ್ನೊಮ್ಮೆ ಸಾಯಲು ಪ್ರಯತ್ನಿಸಿದರೆ ಜೋಕೆ'' ಎಂದು ಉಚ್ಚರಿಸಿ ಶಿಕ್ಷೆ ತಿಳಿಸಿದ, ''ಹೋಗು ಬದುಕಲು ಒಂದು ನೆವ ಹುಡುಕಿಕೊ.''

Edited, Published, printed and owned by **Venkataramana Gowda,** No1, 2nd floor, 1st Cross, R. K. Street, Seshadripuram, BANGALORE - 560 020.
Printed at Shubhodaya Printers, Basavangudi, Bangalore.

